I

# KARNATAKA KAVIRAJAMARGAM

## ಕರ್ಣಾಟಕ

## ಕವಿರಾಜಮಾರ್ಗಂ

EDITED BY

A. VENKATA RAU, B.A., L.T.,
*Reader in Kanarese,*

AND

PANDIT H. SESHA AIYANGAR,
*Fellow in Kanarese,*
*University Oriental Research Institute, Madras.*







MADRAS:
PRINTED AT ANANDA PRESS.

1930

# ಕವಿರಾಜಮಾರ್ಗದಲ್ಲಿಯ.

## ವಿಷಯಸೂಚಿಕೆ.



(1) ಈ 93 ನೆಯ ಕಂದವು ಲಕ್ಷ್ಯ ಲಕ್ಷಣ ಸಮನ್ವಯ ಪದ್ಯವಾದುದರಿಂದ 94 ನೆಯದಾಗಿಯೂ 94 ನೆಯ ಲಕ್ಷ್ಯಪದ್ಯವು 93 ನೆಯ ಪದ್ಯವಾಗಿಯೂ ಇರಬೇಕು. ಮೂಲಪ್ರತಿಗಳಲ್ಲಿದ್ದಂತೆ ಮುದ್ರಿಸಿದೆ, ಮತ್ತು "ವನರುಹದಳನಯನೇನಿ" ಎಂಬಲ್ಲಿ ಲಕ್ಷಣಾನುಗುಣವಾಗಿ "ವನರುಹ ದಳನಯ ನೆನಿ" ಎಂದು ಇರಬೇಕು.

## ಪರಿಚ್ಛೇದ II.

* ಪದ, ಪಾದ ಪ್ರತ್ಯಾಗತಲಕ್ಷ್ಯಗಳು ಲಕ್ಷಣಕ್ಕೆ ಹೋಲುವುದಿಲ್ಲ. ಪದ್ಯಗಳು ತುಂಬಾ ಅಶುದ್ಧವಾಗಿರುವಂತೆ ಕಾಣಬರುವುದು.

## III. ಪರಿಚ್ಛೇದ.

# ಅವತರಣಿಕೆ.



"ನೃಪತುಂಗ ರಚಿತ ಕವಿರಾಜಮಾರ್ಗ"ವೆಂದು ಈ ಮೊದಲೇ ಒಂದುಸಾರಿ ಮುದ್ರಿತವಾಗಿರುವ ಅಲಂಕಾರ ಗ್ರಂಥವು ಈಗ ನಮಗೆ ದೊರೆತಿರುವ ಕನ್ನಡ ಗ್ರಂಥಗಳೊಳಗೆಲ್ಲಾ ಅತಿಪ್ರಾಚೀನತಮವಾದುದು. ಇದು ಕನ್ನಡನಾಡಿನ ವಿಸ್ತಾರ, ಭಾಷಾಸ್ವರೂಪ, ಕನ್ನಡ ಕಾವ್ಯಗಳ ಲಕ್ಷಣ, ಹೆಸರು, ಶೈಲಿ, ಪ್ರಾಚೀನ ಕರ್ಣಾಟಕ ಕವಿಗಳು, ಮೊದಲಾದ ಹಲವು ಮುಖ್ಯವಿಷಯಗಳನ್ನು ತನ್ನ ಪೀಠಿಕೆಯಲ್ಲಿ ತಿಳಿಸಿಕೊಡುವುದಾದರೂ, ಸ್ವಕರ್ತೃವಿನ ವಿಷಯವನ್ನುಮಾತ್ರ ಕಂಠೋಕ್ತವಾಗಿ ಎಲ್ಲಿಯೂ ತಿಳಿಸದಿರುವುದನ್ನು ನೋಡಿದರೆ ಅತ್ಯಾಶ್ಚರ್ಯವಾಗುವುದು. ಈ ಕಾರಣದಿಂದಲೇ ವಿಮರ್ಶಕರಿಗೆ ಈ ವಿಷಯವನ್ನು ವಿಚಾರಮಾಡುವ ಕುತೂಹಲವು ಪದೇ ಪದೇ ಹುಟ್ಟುವುದು ಸ್ವಾಭಾವಿಕವಾದುದೇ. ಈ ಗ್ರಂಥವು ಮುದ್ರಿತವಾಗಿ ಇಂದಿಗೆ ಮೂವತ್ತು ವರುಷಗಳಾದರೂ ಗ್ರಂಥಕರ್ತೃವಿನ ವಿಷಯವಾಗಿ ವಾದ ಪ್ರತಿವಾದಗಳು ಹುಟ್ಟಿ, ಇದು ವರೆಗೂ ಯಾವ ವಿಧವಾದ ಒಂದು ನೆಲೆಯನ್ನೂ ಹೊಂದಿರುವುದಿಲ್ಲ. ಕ್ರಿ. ಶ. 815 ರಿಂದ 877 ರ ತನಕ ಆಳಿ ಬಾಳಿದ ರಾಷ್ಟ್ರಕೂಟ ಸಾರ್ವಭೌಮನಾದ ನೃಪತುಂಗನೇ ಈ "ಕವಿರಾಜಮಾರ್ಗ" ಗ್ರಂಥವನ್ನು ಬರೆದವನೆಂದು ಮೆ|| ಬಿ. ಯಲ್. ರೈಸ್ ಸಾಹೇಬರವರೂ, ಮ|| ರಾ|| ಕೆ. ಬಿ ಪಾಠಕರವರೂ, ವೇ|| ಮೂ|| ನಾರಾಯಣಶ್ರೀನಿವಾಸರಾಜಪುರೋಹಿತರೂ, ಒಂದು ಕಡೆಯಿಂದ ಸಾಧಿಸುತ್ತಿರುವರು. ಇದಕ್ಕೆ ಪ್ರತಿಯಾಗಿ ಡಾ|| ಫ್ಲೀಟರವರು "ಈ ಕವಿರಾಜಮಾರ್ಗ" ಗ್ರಂಥವು, ರಾಷ್ಟ್ರಕೂಟ ರಾಜನಾದ ಅಮೋಘವರ್ಷ ಅಥವಾ ನೃಪತುಂಗನ ಆಳಿಕೆಯಲ್ಲಿ ರಚಿತವಾದುದೆಂದೂ, ಇದನ್ನು ಕವೀಶ್ವರನೆಂಬ ಬಿರುದುಳ್ಳ ಒಬ್ಬ ಕವಿಯು ತನ್ನ ಆಶ್ರಯದಾತನಾದ ಅಮೋಘವರ್ಷನ ಪ್ರೋತ್ಸಾಹದಿಂದ ಬರೆದನೆಂದೂ; ಸಾಮಾನ್ಯವಾದ ಪ್ರೋತ್ಸಾಹ ಮಾತ್ರವೇ ಅಲ್ಲದೆ, ಈ ಗ್ರಂಥರಚನೆಯಲ್ಲಿ ಕವಿಗೆ ಮೊದಲಿನಿಂದ ಕೊನೆಯವರೆಗೂ ವಿಶೇಷವಾಗಿ ಸಲಹೆಗಳನ್ನು ಕೊಡುತ್ತ ಪ್ರಬಲವಾಗಿ ಪ್ರೋತ್ಸಾಹಿಸಿದ ನೃಪತುಂಗನಿಗೆ ಹೆಚ್ಚಿನ ಪ್ರಾಮುಖ್ಯವನ್ನು ಕೊಡಲುದ್ದೇಶಿಸಿ, ಕವಿಯು ಗ್ರಂಥದ ಹಲವೆಡೆಗಳಲ್ಲಿ "ನೃಪತುಂಗ ದೇವಮಾರ್ಗ" "ಉದಿತ" "ಉಕ್ತಕ್ರಮ" "ಅನುಮತ" ಎಂದೂ, ಪರಿಚ್ಛೇದಾಂತ್ಯಗದ್ಯಗಳಲ್ಲಿ ತನ್ನ ಹೆಸರನ್ನೇ ಹೇಳದೆ "ನೃಪತುಂಗಾನುಮತ"

ಎಂದೂ ಹೇಳಿರುವುದರಿಂದ, ಅರ್ವಾಚೀನರಾದ ಭಟ್ಟಾಕಳಂಕ ಮೊದಲಾದವರಿಗೆ ನೃಪತುಂಗನೇ ಈ ಗ್ರಂಥವನ್ನು ಬರೆದನೆಂಬ ಭ್ರಾಂತಿಯುಂಟಾಗಿರಬಹುದೆಂದೂ ಅಭಿಪ್ರಾಯಪಡುವರು. ಕರ್ಣಾಟಕ ಕವಿಚರಿತ್ರೆಯ ಕರ್ತೃಗಳಾದ ರಾವ್ ಬಹದೂರ್. ರಾ. ನರಸಿಂಹಾಚಾರ್ಯರವರು "ಯದ್ಯಪಿ ಈ ಗ್ರಂಥವು ನೃಪತುಂಗ ಗ್ರಂಥವೆಂದು ಪ್ರತೀತಿಯಿದ್ದರೂ ಮೂರು ಪರಿಚ್ಛೇದಗಳ ಅಂತ್ಯಪದ್ಯಗಳಲ್ಲಿ "ಶ್ರೀವಿಜಯ ಪ್ರಭೂತಮನಿದಂ........."ಎಂದಿರುವುದರಿಂದಲೂ, ಪರಿಚ್ಛೇದಾಂತ್ಯಗದ್ಯಗಳಲ್ಲಿ ನೃಪತುಂಗ "ವಿರಚಿತ" ಎಂದಿರದೆ ನೃಪತುಂಗ "ಅನುಮತ" ಎಂದಿರುವುದರಿಂದಲೂ, ದುರ್ಗಸಿಂಹನ ಪಂಚತಂತ್ರದಲ್ಲಿ ಉಕ್ತವಾಗಿರುವ "ಶ್ರೀ ವಿಜಯರ ಕವಿಮಾರ್ಗಂ" ಎಂಬ ಪದ್ಯದಿಂದಲೂ, ಶ್ರೀ ವಿಜಯನೆಂಬ ಬಿರುದು ನೃಪತುಂಗನಿಗೆ ಇತ್ತೆಂದು ಹೇಳಲು ಶಾಸನಾದಿಗಳ ಆವ ಆಧಾರಗಳೂ ಇದುವರೆಗೆ ದೊರಕಿಲ್ಲವಾದುದರಿಂದಲೂ, "ಶ್ರೀವಿಜಯ" ನೆಂಬ ನೃಪತುಂಗನಸಭಾಸದನು ಈ ಗ್ರಂಥವನ್ನು ಬರೆದಿರಬಹುದೆಂಬ ಊಹೆಗೆ ಅವಕಾಶವಿದೆ" ಎಂದು ಅಭಿಪ್ರಾಯಪಡುವರು. ಮ. ರಾ. ರಾ|| ಬ|| ರಾ|| ನರಸಿಂಹಾಚಾರ್ಯರವರ ಮೇಲಿನ ಅಭಿಪ್ರಾಯವನ್ನೇ ಮ|| ರಾ|| ಟಿ. ಯಸ್. ವೆಂಕಣ್ಣಯ್ಯನವರೂ, ಮ|| ರಾ|| ಎ. ಆರ್. ಕೃಷ್ಣಶಾಸ್ತ್ರಿಗಳವರೂ, ವಿಸ್ತರವಾಗಿ ಉಪಪಾದಿಸಿ ಬರೆದಿರುವರು

ಹೀಗೆ ಭಿನ್ನ ಭಿನ್ನವಾಗಿ ಅಭಿಪ್ರಾಯಪಡುವ ವಿಮರ್ಶಕರೆಲ್ಲರೂ ಈ ಗ್ರಂಥವು ಅತಿ ಪ್ರಾಚೀನತಮವಾದುದೆಂದೂ, ಕ್ರಿ ಶ 815 ರಿಂದ 877 ರವರೆಗೆ ಆಳಿದ ಅಮೋಘವರ್ಷ ಅಥವಾ ನೃಪತುಂಗನ ಕಾಲದಲ್ಲಿ ರಚಿತವಾದುದೆಂದೂ, ನಿರ್ವಿವಾದವಾಗಿ ಒಪ್ಪಿಕೊಂಡಿದ್ದರೂ ಗ್ರಂಥಕರ್ತೃವಿನ ವಿಚಾರದಲ್ಲಿಮಾತ್ರ ಭಿನ್ನ ಭಿನ್ನರಾಗಿಯೇ ಇರುವರು— ಈ ವಿಮರ್ಶಕರೆಲ್ಲರೂ ಈ ಗ್ರಂಥದಲ್ಲಿಯೂ, ಇತರ ಗ್ರಂಥಗಳಲ್ಲಿಯೂ, ಶಾಸನಗಳಲ್ಲಿಯೂ, ದೊರಕ ಬಹುದಾದ, ಈ ಗ್ರಂಥಕ್ಕೆ ಸಂಬಂಧಪಟ್ಟ ವಿಷಯಗಳಲ್ಲಿ ಕೆಲವನ್ನು ತಾವು ಊಹಿಸುವ ವಿಷಯಕ್ಕೆ ತಕ್ಕಂತೆ ಅನ್ವಯಿಸಿ ಅರ್ಥಹೇಳಿಯೂ, ಕೆಲವನ್ನು ಸಂದಿಗ್ಧ ವಿಷಯಗಳೆಂದು ದೂರಮಾಡಿಯೂ, ಮತ್ತೆ ಕೆಲವಕ್ಕೆ ಗಮನವನ್ನೇ ಕೊಡದೆಯೂ, ಇರುವಂತೆ ಗೊತ್ತಾಗುವುದು ಹೀಗೆ ಭಿನ್ನ ಭಿನ್ನವಾಗಿರುವ ಈ ಗ್ರಂಥದ ಬಾಹ್ಯಾಭ್ಯಂತರಸಾಧನಗಳಿಗೆ ಐಕಕಂಠ್ಯವನ್ನು ಕಲ್ಪಿಸಿ, ಸಾಮಂಜಸ್ಯವನ್ನು ನಿರ್ವಹಿಸಲು ಒಟ್ಟಿನಲ್ಲಿ ಹೇಳಬಹುದಾದ ಅಭಿಪ್ರಾಯವೇ ಈ ಅವತರಣಿಕೆಯ ಮುಖ್ಯೋದ್ದೇಶವು.

ರಾಷ್ಟ್ರಕೂಟ ರಾಜನಾದ ನೃಪತುಂಗನು ಈ ಗ್ರಂಥದ ಕರ್ತೃವಲ್ಲ ಶ್ರೀವಿಜಯನೆಂಬ ಕವಿಯು "ಕವಿಮಾರ್ಗ" ವೆಂಬ ಒಂದು ಲಕ್ಷಣಗ್ರಂಥವನ್ನು ಬರೆದಿದ್ದನು

ಕವೀಶ್ವರ ನೆಂಬ ಬಿರುದುಳ್ಳ ಕವಿಯೊಬ್ಬನು ಶ್ರೀ ವಿಜಯಕೃತವಾದ ಈ ಕವಿಮಾರ್ಗ ವನ್ನೇ ತೆಗೆದುಕೊಂಡು ಕೆಲವೆಡೆಗಳಲ್ಲಿ ಮಾರ್ಪಡಿಸಿ, ಮತ್ತೆ ಕೆಲವೆಡೆಗಳಲ್ಲಿ ಹೊಸ ದಾಗಿ ಕೆಲವು ವಿಷಯಗಳನ್ನು ಸೇರಿಸಿ, "ಕವಿರಾಜಮಾರ್ಗ" ವೆಂಬ ಹೆಸರಿನಿಂದ ಈಗ್ರಂಥವನ್ನು ಬರೆದು, ತನ್ನ ಆಶ್ರಯದಾತನೂ "ನೃಪತುಂಗ" "ಅತಿಶಯಧವಳ" ಮೊದಲಾದ ಬಿರುದುಗಳುಳ್ಳವನೂ, ಆದ ಅಮೋಘವರ್ಷನೆಂಬ ರಾಷ್ಟ್ರಕೂಟ ಸಾರ್ವಭೌಮನಿಂದ ವಿಶೇಷ ಪ್ರಯೋಜನವನ್ನು ಹೊಂದಿ, ನೃಪತುಂಗನೇ ಈ ಗ್ರಂಥವನ್ನು ಬರೆದನೆಂಬ ಪ್ರವಾದವು ಬರಬೇಕೆಂದು ತನ್ನ ಹೆಸರನ್ನು ಎಲ್ಲಿಯೂ ಸ್ಪಷ್ಟವಾಗಿ ಹೇಳದೆ, ಸೂಕ್ಷ್ಮವಿಚಾರಿಗಳಿಗೆ ಮಾತ್ರ ತಿಳಿವಂತೆ, ಅಲ್ಲಲ್ಲಿ ಈ ವಿಷಯ ವನ್ನು ಸೂಚಿಸಿರುವ ನೆಂದು ಊಹಿಸುವುದಕ್ಕೆ ಕಾರಣಗಳಿವೆ. ಈ ಪದ್ಧತಿಯು ಸಂಸ್ಕೃತ ಕವಿಗಳಲ್ಲಿಯೂ ಸಾಧಾರಣವಾಗಿ ಇದ್ದೇ ಇರುವುದು. ರತ್ನಾವಳಿ, ನಾಗಾನಂದ, ಪ್ರಿಯದರ್ಶಿಕಾ ಎಂಬ ಮೂರು ಸಂಸ್ಕೃತ ನಾಟಕಗಳನ್ನೂ ಕ್ರಿ. ಶ. ಏಳನೇ ಶತಮಾನದಲ್ಲಿ ವಿಸ್ತಾರವಾದ ಉತ್ತರಹಿಂದುಸ್ಥಾನದ ಸಾಮ್ರಾಜ್ಯವನ್ನು ಆಳಿದ ಶ್ರೀಹರ್ಷ (ಹರ್ಷವರ್ಧನ) ಚಕ್ರವರ್ತಿಯು ಬರೆದನೆಂದು, "ಶ್ರೀ ಹರ್ಷೋ ನಿಪುಣಃ ಕವಿಃ ಪರಿಷದಪ್ಯೇಷಾ ಗುಣಗ್ರಾಹಿಣೀ" ಎಂಬ ಆಯಾನಾಟಕಗಳ ಕವಿ ಕಾವ್ಯಪ್ರಶಂಸಾ ಸೂಚಕವಾದ ಪ್ರಸ್ತಾವನೆಯ ಪದ್ಯದಿಂದ ತಿಳಿದುಬರುವುದರಿಂದ, ಜನರೆಲ್ಲರೂ ಶ್ರೀ ಹರ್ಷನೇ ಈ ನಾಟಕಗಳ ಕರ್ತೃವೆಂದು ತಿಳಿದುಕೊಂಡಿರುವರು. ಆದರೆ ಕ್ರಿ. ಶ. 12 ನೇ ಶತಮಾನದಲ್ಲಿ ಬರೆಯಲ್ಪಟ್ಟು ಅಲಂಕಾರ ಗ್ರಂಥಗಳಲ್ಲಿ ಪ್ರಾಮಾಣಿಕವೆಂದು ಅಂಗೀಕೃತವಾಗಿರುವ "ಕಾವ್ಯಪ್ರಕಾಶ" ದಲ್ಲಿಯ ಕಾವ್ಯ ಪ್ರಯೋಜನಗಳನ್ನು ಹೇಳುವ "ಕಾವ್ಯಂ ಯಶಸೇಽರ್ಥಕೃತೇ" ಎಂಬ ವಾಕ್ಯಕ್ಕೆ ವ್ಯಾಖ್ಯಾಕಾರರು ಯಶಸ್ಸಿಗಾಗಿ ಕಾಳಿದಾಸಾದಿಗಳೂ, ದ್ರವ್ಯಾರ್ಜನೆಗಾಗಿ ಧಾವು ಕಾದಿಗಳೂ ಕಾವ್ಯಗಳನ್ನು ಬರೆದರೆಂಬುದಕ್ಕೆ "ಶ್ರೀಹರ್ಷಾದೇಃ ಧಾವುಕಾದೀನಾ ಮಿವಧನಂ" ಎಂಬಲ್ಲಿ, ಧಾವುಕನು ಧನಕ್ಕಾಗಿ ಶ್ರೀ ಹರ್ಷನ ಹೆಸರಿನಲ್ಲಿ ಕಾವ್ಯಗಳನ್ನು ಬರೆದನೆಂದು ವಿವರಣೆ ಮಾಡಿರುವರು. 7 ನೇ ಶತಮಾನದಲ್ಲಿದ್ದ ಧಾವುಕನನ್ನು 9 ನೇ ಶತಮಾನಲ್ಲಿದ್ದ ಕವೀಶ್ವರನು ಅನುಕರಿಸಿ ತಾನುಬರೆದ ಕವಿರಾಜಮಾರ್ಗಗ್ರಂಥ ವನ್ನು ತನ್ನ ಆಶ್ರಯ ದಾತನಾದ ನೃಪತುಂಗನೇ ಬರೆದಂತೆ ಆ ಗ್ರಂಥದಲ್ಲಿ ಅಲ್ಲಲ್ಲಿ ಹೇಳಿರುವನೆಂದರೆ ಅದು ಅನುಚಿತವೆನಿಸಿಕೊಳ್ಳಲಾರದು.

ಕನ್ನಡದಲ್ಲಿ ಕಾವ್ಯಲಕ್ಷಣವನ್ನು ವಿಶದವಾಗಿ ಉಪಪಾದಿಸುವ ಅಲಂ ಕಾರಗ್ರಂಥವಾದ ಕಾವ್ಯಾವಲೋಕನವನ್ನುಬರೆದ ನಾಗವರ್ಮನು ಪ್ರಾಚೀನ ವಾದ ಈ ಅಲಂಕಾರಗ್ರಂಥದ ಹೆಸರನ್ನೇ ಹೇಳಿರುವುದಿಲ್ಲ, ನಾಗವರ್ಮನಿಗೆ

ಅರ್ವಾಚೀನನೂ ಕೇವಲ ವೈಯಾಕರಣನೂ ಆದ ಕೇಶಿರಾಜನು ಸ್ವಕೃತ ಶಬ್ದಮಣಿ ದರ್ಪಣದಲ್ಲಿ ಸ್ತುತ್ಯರಾದ ಪೂರ್ವಕವಿಗಳ ಗೋಷ್ಠಿಯಲ್ಲಿ "ಶ್ರೀವಿಜಯ" ಎಂಬ ಹೆಸರನ್ನು ಹೇಳಿ, ಕವೀಶ್ವರ ಅಥವಾ ನೃಪತುಂಗನ ಹೆಸರನ್ನು ಹೇಳದೆ, ಈ ಕವಿರಾಜ ಮಾರ್ಗದಲ್ಲಿರುವ ಮೂರು ಪದ್ಯಗಳನ್ನು ಸ್ವಲ್ಪಪಾಠ ಭೇದದಿಂದ ಉದಾಹರಿಸಿರುವನು. ನೃಪತುಂಗನ ಕಾಲಕ್ಕೆ ಬಹಳ ಅರ್ವಾಚೀನನಾದ (ಕ್ರಿ. ಶ. 1604) ಭಟ್ಟಾಕಳಂಕನುಮಾತ್ರ ದಕ್ಷಿಣೋತ್ತರಮಾರ್ಗಗಳ ಸ್ವರೂಪವನ್ನು ವಿವರಿಸುವ ಈ ಗ್ರಂಥವನ್ನು ನೃಪತುಂಗ ಗ್ರಂಥವೆಂದು ಹೇಳಿರುವನು. ಇವುಗಳೆಲ್ಲವನ್ನೂ ನೋಡಿದರೆ, ನಾಗವರ್ಮನ ಕಾಲಕ್ಕೆ ಅಲಂಕಾರ ಶಾಸ್ತ್ರದಲ್ಲಿ ಭಿನ್ನಭಿನ್ನಮತಗಳನ್ನು ಸೂಚಿಸುವ ಹಲವು ಗ್ರಂಥಗಳು ಹುಟ್ಟಿದ್ದುದರಿಂದ, ನಾಗವರ್ಮನು ಪ್ರಾಚೀನರಾದ ಲಾಕ್ಷಣಿಕರ ಮತವನ್ನು ಮಾತ್ರ ಅನುಸರಿಸಿ ಕನ್ನಡದಲ್ಲಿ ಸ್ವತಂತ್ರ ಗ್ರಂಥವಲ್ಲದ (ಪರಿವರ್ತಿತವಾದ) ಈ ಕವಿರಾಜಮಾರ್ಗವನ್ನು ಅನುಸರಿಸದೆಯೂ, ಇದರ ಹೆಸರನ್ನು ಕೂಡ ಹೇಳದೆಯೂ ಇರಬಹುದೆಂದು ತೋರುತ್ತದೆ. ಈತನು ಭಾಮಹ, ದಂಡಿ, ವಾಮನ, ರುದ್ರಟ, ಅಮರಸಿಂಹ, ಉದ್ಭಟ, ಮೊದಲಾದ ಹಲವು ಸಂಸ್ಕೃತ ಆಲಂಕಾರಿಕರ ಗ್ರಂಥಗಳಿಗೆ ಗಮನಕೊಟ್ಟು, ಅವರ ಅಭಿಪ್ರಾಯಗಳನ್ನು ಸಂಗ್ರಹಿಸಿ, ತಾನೇ ಸ್ವತಂತ್ರ ಗ್ರಂಥವನ್ನು ಬರೆದುದರಿಂದ, ಶ್ರೀ ವಿಜಯನ ಕವಿಮಾರ್ಗಕ್ಕಾಗಲಿ, ಕವೀಶ್ವರನ ಈ ಕವಿರಾಜ ಮಾರ್ಗಕ್ಕಾಗಲಿ, ಪ್ರಾಮುಖ್ಯವನ್ನು ಕೊಡದಿರಬಹುದು. ಕೇಶಿರಾಜನ ಕಾಲದಲ್ಲಾದರೋ ಪ್ರಾಚೀನವಾದ ಶ್ರೀವಿಜಯನ ಕವಿಮಾರ್ಗವೇ ವಿಶೇಷ ಪ್ರಚಾರದಲ್ಲಿದ್ದುದರಿಂದ, ತತ್ಕರ್ತೃವಾದ ಶ್ರೀವಿಜಯನನ್ನು ಪೂರ್ವ ಕವಿಗೋಷ್ಠಿಯಲ್ಲಿ ಸೇರಿಸಿ ಸ್ತುತಿಸಿ, ಆಗ್ರಂಥದಿಂದಲೇ ತಾನೂ ಮೂರುನಾಲ್ಕು ಪದ್ಯಗಳನ್ನು ಲಕ್ಷ್ಯವಾಗಿ ಉದಾಹರಿಸಿರಬಹುದೆಂದು ತೋರುತ್ತದೆ. ಅರ್ವಾಚೀನನಾದ ಭಟ್ಟಾಕಳಂಕನ ಕಾಲಕ್ಕೆ ಶ್ರೀ ವಿಜಯನ ಕವಿಮಾರ್ಗವು ಕಾರಣಾಂತರಗಳಿಂದ ದೊರಕದೆ, ಈ ಕವಿರಾಜಮಾರ್ಗವೇ ಹೆಚ್ಚಿನ ಪ್ರಾಶಸ್ತ್ಯವನ್ನು ಪಡೆದಿದ್ದುದರಿಂದ ಈ ಗ್ರಂಥವನ್ನೇ ನೃಪತುಂಗಗ್ರಂಥವೆಂದು ಈತನು ಭ್ರಮಿಸಿರಬಹುದೆಂದು ಊಹಿಸಿಹೇಳುವುದು ಅಷ್ಟೊಂದು ಅನುಚಿತವಾಗಲಾರದು.

ನಮ್ಮ ಅಭಿಪ್ರಾಯಕ್ಕೆ ಪ್ರಕೃತದಲ್ಲಿ ದೊರೆತಿರುವ ಸಾಧನಗಳೆಲ್ಲವೂ, ಎಷ್ಟರ ಮಟ್ಟಿಗೆ ಸಹಾಯಕಗಳಾಗುವುವೆಂಬುದನ್ನು ಇನ್ನು ವಿಚಾರಮಾಡುವೆವು —

(1) ಶ್ರೀವಿಜಯ ಕೃತಕವಿಮಾರ್ಗ.

ಈ ಕವಿರಾಜಮಾರ್ಗ ಗ್ರಂಥದಲ್ಲಿ ಹೇಳಿರುವ "ಪರಮ ಶ್ರೀವಿಜಯ... .. ಕವಾಪ್ಯಕಾವ್ಯಕ್ಕೆಂದುಂ'' ಎಂಬವಾಕ್ಯದಿಂದ ಶ್ರೀ ವಿಜಯನು ಒಬ್ಬ ಕವಿಯೆಂಬುದು

ಸ್ಪಷ್ಟ ವಾಗುವುದು. "ಶ್ರೀವಿಜಯರ ಕವಿಮಾರ್ಗಂ" ಎಂದು ದುರ್ಗಸಿಂಹನು ತನ್ನ ಪಂಚತಂತ್ರದ ಪೀಠಿಕಾಪ್ರಕರಣದಲ್ಲಿ ಶ್ರೀವಿಜಯನು "ಕವಿಮಾರ್ಗ" ವೆಂಬ ಗ್ರಂಥವನ್ನು ಬರೆದನೆಂದು ಹೇಳಿರುವುದರಿಂದ, ದುರ್ಗಸಿಂಹನು ಹೇಳುವ ಶ್ರೀವಿಜಯನೇ ಈತನಾಗಿರಬಹುದೆಂದೂ ಹೇಳಬಹುದು. ಈಕವಿರಾಜಮಾರ್ಗದ ಪರಿಚ್ಛೇದಾಂತ್ಯ ಪದ್ಯಗಳಲ್ಲಿ "ಶ್ರೀವಿಜಯ ಪ್ರಭೂತಮನಿದಂ" ಎಂಬ ಭಾಗಗಳಿಂದ, ಶ್ರೀವಿಜಯನು ಒಂದು ಅಲಂಕಾರ ಗ್ರಂಥವನ್ನು ಬರೆದಿರಬಹುದೆಂದು ಸೂಚಿತವಾಗುದರಿಂದ, ಶ್ರೀವಿಜಯನುಬರೆದ "ಕವಿಮಾರ್ಗವು" ಒಂದು ಅಲಂಕಾರ ಗ್ರಂಥವಾಗಿಯೇ ಇರಬೇಕು—ಈ ಕವಿಮಾರ್ಗವನ್ನನುಸರಿಸಿ ಎಂದರೆ. ಅದರ ಹಲವು ಭಾಗಗಳನ್ನೇ ಆರಿಸಿಕೊಂಡು, ಈ ಪ್ರಕೃತ ಕವಿರಾಜಮಾರ್ಗ ಗ್ರಂಥವು ವಿರಚಿತವಾಗಿರಬೇಕೆಂಬ ಅಂಶಕ್ಕೆ ಈ ಗ್ರಂಥದ ಮೂರನೆಯ ಪದ್ಯವಾದ ಸರಸ್ವತೀ ಸ್ತುತಿರೂಪವಾದ ಮಂಗಳಪದ್ಯವು ಹೆಚ್ಚು ಸಹಾಯಕವಾಗುತ್ತಿದೆ. ಸರಸ್ವತೀ ಸ್ತುತಿರೂಪವಾದ ಮಂಗಳ ಪದ್ಯಗಳನ್ನುಳ್ಳ ದಂಡಿಯಕಾವ್ಯಾದರ್ಶವನ್ನನುಸರಿಸಿಯೇ ಈಕವಿಮಾರ್ಗವು ಬರೆಯಲ್ಪಟ್ಟಿರುವುದೆಂದು ಊಹಿಸುವುದಕ್ಕೂ ಕಾರಣಗಳಿವೆ. ಕನ್ನಡ ಕವಿಗಳು ಸಾಧಾರಣವಾಗಿ ಗ್ರಂಥದ ಆದಿಯ ಮಂಗಳಪದ್ಯಗಳ ಪ್ರಾರಂಭದಲ್ಲಿ "ಶ್ರೀ"ಶಬ್ದವಿರಬೇಕೆಂಬ ನಿಯಮವನ್ನನುಸರಿಸಿರುವುದರಿಂದ, ಕವಿರಾಜಮಾರ್ಗದಲ್ಲಿ ಶ್ರೀಶಬ್ದವನ್ನು ಆದಿಯಲ್ಲಿ ಉಳ್ಳ ಸರಸ್ವತೀ ಸ್ತುತಿರೂಪವಾದ ಮೂರನೆಯಪದ್ಯವು ಒಂದು ಗ್ರಂಥದ ಮಂಗಳಪದ್ಯವೆಂಬುದರಲ್ಲಿ ಸಂದೇಹವಿಲ್ಲ. ಪರಿಶೇಷಾನುಮಾನದಿಂದ ಇದೇ ಕವಿಮಾರ್ಗದ ಮಂಗಳಪದ್ಯವೆಂದೂ ತಿಳಿಯಬಹುದು ಕವಿರಾಜಮಾರ್ಗ ಗ್ರಂಥಕರ್ತನು ಕವಿಮಾರ್ಗದ ಈ ಮಂಗಳಪದ್ಯವನ್ನು ತೆಗೆದುಕೊಂಡು, ತನ್ನ ಗ್ರಂಥದಲ್ಲಿ ಸೇರಿಸಿ, ತಾನೂ ತನ್ನ ಗ್ರಂಥಕ್ಕೆ ಹೊಸದಾಗಿ ಮತ್ತೆರಡು ಮಂಗಳಪದ್ಯಗಳನ್ನುಮಾಡಿ ಸೇರಿಸಿರುವನು. ವೈದಿಕಮತಾನುಸಾರಿಯಾದ ದಂಡಿಯ ಸರಸ್ವತೀ ಸ್ತುತಿರೂಪವಾದ ಮಂಗಳಪದ್ಯದಲ್ಲಿರುವ "ಚತುರ್ಮುಖ ಮುಖಾಂಭೋಜವನ" (ಎಂದರೆ ವೈದಿಕಪುರಾಣಗಳಲ್ಲಿ ಸರಸ್ವತಿಯು ಸರ್ವದಾ ಬ್ರಹ್ಮನಮುಖದಲ್ಲಿರುವಳು ಎಂಬ ವರ್ಣನೆ ಯಿರುವುದು. ಜೈನರಲ್ಲಿ ಈರೀತಿಇಲ್ಲ) ಎಂಬ ವಿಶೇಷಣವೊಂದು ಹೊರತು ಉಳಿದ ವಿಶೇಷಣಗಳೆಲ್ಲವೂ ಈ ಮಂಗಳಪದ್ಯದಲ್ಲಿ ಕಂಡುಬರುವುದೆಂಬುದನ್ನು ಈ ಕೆಳಗೆ ತೋರಿಸಿರುವ ಹೋಲಿಕೆಯಿಂದ ಕಾಣಬಹುದು.

| (ದಂಡಿಯಪದ್ಯದಲ್ಲಿರುವ ಪದಗಳು.) | (ಕವಿಮಾರ್ಗದ ಪದ್ಯದಲ್ಲಿರುವ ಪದಗಳು.) |
|---|---|
| ಸರ್ವಶುಕ್ಲಾ | ಶ್ರೀವಿಶದವರ್ಣೆ. |
| (ಚತುರ್ಮುಖಮುಖಾಂಭೋಜವನ) | |
| ಹಂಸವಧೂಃ | ಹಂಸವಿಭಾವದೆ. |

| | |
|---|---|
| ಮಮ ಮಾನಸೇ | ಮನ್ಮಾನಸದೊಳ್. |
| ಸರಸ್ವತೀ | ಸರಸ್ವತೀದೇವಿ. |
| ರಮತಾಂ | ಕೂರ್ತು ನೆಲೆಗೊಳ್ಗೆ. |

ಮಧುರಾರಾವೋಚಿತೆ—ಚತುರರುಚಿರ ಪದರಚನೆ—ಚಿರಂದೇವಿ, ಎಂಬೀ ಪದಗಳು ದಂಡಿಯ ಪದ್ಯದಲ್ಲಿಲ್ಲ. ಇವನ್ನು ವೃತ್ತಪೂರ್ತಿಗಾಗಿಯೂ, ಕಾವ್ಯಪರವಾಗಿ ಮತ್ತೊಂದರ್ಥವು ತನ್ನ ಪದ್ಯದಲ್ಲಿ ತೋರುವುದಕ್ಕಾಗಿಯೂ, ಈಕವಿಯು ಸೇರಿಸಿರುವನು. ಈ ಬಗೆಯ ಬದಲಾವಣೆಯಿಂದ ಕವಿಮಾರ್ಗಕರ್ತೃವಾದ ಈ ಶ್ರೀವಿಜಯನು ಜೈನಮತದವನೆಂದೂ ಹೇಳಬಹುದು.

ಕೇಶಿರಾಜನು ಪೂರ್ವಕವಿಗಳ ಕಾವ್ಯಗಳು ತನ್ನ ಲಕ್ಷಣಗ್ರಂಥಕ್ಕೆ ಲಕ್ಷ್ಯಗಳೆಂದು ಹೇಳಲು ಹೊರಟು, ಪೂರ್ವಕವಿಗೋಷ್ಠಿಯಲ್ಲಿ ಈಶ್ರೀವಿಜಯನನ್ನು ಸೇರಿಸಿ ಹೇಳುವಸಂದರ್ಭದಲ್ಲಿ. ಬಹು ಪ್ರಾಚೀನರಾದ"ಗಜಗ, ಗುಣನಂದಿ, ಮನಸಿಜ, ಅಸಗ (ಈತನನ್ನು ಪೊನ್ನನು ಹೇಳಿರುವನು)ಚಂದ್ರಭಟ್ಟ, ಗುಣವರ್ಮ"ಎಂಬ ಕವಿಗಳನ್ನು ಹೇಳಿ ಹತ್ತನೆಯ ಶತಮಾನದವರಾದ ಪಂಪ ಪೊನ್ನರನ್ನರನ್ನು ಹೇಳುವ ಮೊದಲು ಶ್ರೀವಿಜಯನ ಹೆಸರನ್ನು ಹೇಳುವನು.ಹೀಗೆ ಹೇಳುವ ಕೇಶಿರಾಜನು ಶ್ರೀವಿಜಯಕವಿಯ ಗ್ರಂಥದಿಂದ ಆವುದನ್ನಾದರೂ ಲಕ್ಷ್ಯವನ್ನು ತೆಗದುಕೊಂಡೇ ಇರಬೇಕು. ಅಲ್ಲದೆ ಕೇಶಿರಾಜನು ತನ್ನ ವ್ಯಾಕರಣ ಗ್ರಂಥದಲ್ಲಿ ಅಲಂಕಾರಕ್ಕೆ ಸಂಬಂಧಪಡುವ ಒಂದೆರಡು ವಿಷಯಗಳನ್ನು ಹೇಳುವಾಗ, ಲಘ್ವಕ್ಷರಾಂತವಾದ ಪದದಮುಂದೆ ಒತ್ತಕ್ಷರದ ಪದವನ್ನು ಹೇಳಕೂಡದೆಂಬ ಲಕ್ಷಣವನ್ನು ಹೇಳಿ, ಈ ಕವಿರಾಜಮಾರ್ಗದಲ್ಲಿ ತೋರುವ ಪದ್ಯವನ್ನೇ ಉದಾಹರಿಸಿರುವನು. ಮತ್ತು ಲಿಂಗಲಕ್ಷಣವನ್ನು ಹೇಳುವಾಗ ಸಮಸಂಸ್ಕೃತಕ್ಕೂ ದೇಶ್ಯಕ್ಕೂ ಸಮಾಸಮಾಡಕೂಡದೆಂಬ ಲಕ್ಷಣಕ್ಕೆ ಈ ಗ್ರಂಥದಲ್ಲಿನ ಲಕ್ಷ್ಯಪದ್ಯವನ್ನೇ "ಅರಸುಕುಮಾರ...ಮಾರ್ಗಂ" ಉದಾಹರಿಸಿರುವನು. ಆಪಾತತಃ ನೃಪತುಂಗ ಕರ್ತೃಕವೆಂದು ಕಂಡುಬರುವ ಈಕವಿರಾಜ ಮಾರ್ಗದಿಂದಲೇ ಆತನು ವಿಷಯವನ್ನೂ ಲಕ್ಷ್ಯಪದ್ಯವನ್ನೂ ಆರಿಸಿಕೊಂಡಿದ್ದರೆ, ಪೂರ್ವಕವಿಗಳ ಗೋಷ್ಠಿಯಲ್ಲಿ ನೃಪತುಂಗನ ಹೆಸರನ್ನು ಎಂದಿಗೂ ಸೇರಿಸದೆ ಬಿಡುತ್ತಿರಲಿಲ್ಲ. ಹೀಗೆ, ಲಕ್ಷ್ಯ ಗ್ರಂಥಕರ್ತೃಗಳ ಗೋಷ್ಠಿಯಲ್ಲಿ ನೃಪತುಂಗನ ಹೆಸರನ್ನೇ ಹೇಳದೆ, ಶ್ರೀವಿಜಯನ ಹೆಸರನ್ನೇ ಹೇಳಿರುವುದರಿಂದ, ಶಬ್ದಮಣಿ ದರ್ಪಣದಲ್ಲಿ ದೊರೆವ ಪದ್ಯಗಳು ಈ ಶ್ರೀವಿಜಯನ ಕವಿಮಾರ್ಗದ ಪದ್ಯಗಳೆಂದೇ ಹೇಳಬೇಕಾಗುವುದು. ಕವಿರಾಜಮಾರ್ಗದಲ್ಲಿ ತೋರುವ ಪಾಠಕ್ಕೂ, ಶಬ್ದಮಣಿ ದರ್ಪಣದಲ್ಲಿ ತೋರುವ

ಪಾಠಕ್ಕೂ, ಸ್ವಲ್ಪ ಭೇದವು ಇರುವುದರಿಂದ, ಕವಿರಾಜಮಾರ್ಗ ಕರ್ತೃವು ಕವಿಮಾರ್ಗದಿಂದ ತಾನು ಆರಿಸಿಕೊಂಡ ಈ ಪದ್ಯಗಳಲ್ಲಿ ಸ್ವಲ್ಪ ಮಾರ್ಪಾಡನ್ನೂ ಮಾಡಿರುವನೆಂದು ಹೇಳಬಹುದು. ಅಲ್ಲದೆ, ಈ ಕವಿರಾಜಮಾರ್ಗದಲ್ಲಿರುವ "ನುಡಿಗೆಲ್ಲಿಂಸಲ್ಲದ... (I.32) ಎಂಬ ಪದ್ಯವು ಒಂದು ಹಸ್ತ ಲಿಖಿತ ಪ್ರತಿಯಲ್ಲಿಲ್ಲ. ಆದರೆ ಶಬ್ದಮಣಿ ದರ್ಪಣದಲ್ಲಿ ಉದಾಹೃತವಾಗಿದೆ. ಆದುದರಿಂದ ಈ ಕವಿರಾಜಮಾರ್ಗವನ್ನು ಬರೆದವನು ತನ್ನ ಕಾಲಕ್ಕೇ ಅಪ್ರಸಿದ್ಧವಾಗಿದ್ದ ಚತ್ತಾಣ, ಬೆದಂಡೆ, ಎಂಬ ಕಾವ್ಯಗಳಿಗೆ ಉದಾಹರಣೆಯನ್ನು ಕೊಡಲು ಶಕ್ತಿಸಾಲದೆ, ಕವಿಮಾರ್ಗದ ಚತ್ತಾಣ ಬೆದಂಡೆ ಎಂಬ ಕನ್ನಡ ಕಾವ್ಯಭೇದಗಳ ಹೆಸರನ್ನು ಉಪಪಾದಿಸುವ, ಆ ಪದ್ಯವನ್ನು ಬಿಟ್ಟಿದ್ದರೂ ಇರಬಹುದು. ಈ ಕೇಶಿರಾಜನಿಗೆ ಸ್ವಲ್ಪ ಕಾಲಹಿಂದೆ ಇದ್ದ ನಾಗವರ್ಮನೂ, ಚತ್ತಾಣ, ಬೆದಂಡೆ, ಕಾವ್ಯಗಳ ಲಕ್ಷಣವನ್ನು ಹೇಳಿರುವನು. ಉದಾಹರಣೆಗಳನ್ನು ಮಾತ್ರಕೊಡಲಿಲ್ಲ. ಕೇಶಿರಾಜನುಮಾತ್ರ ಕವಿಮಾರ್ಗದಿಂದಲೇ ಕವಿರಾಜ ಮಾರ್ಗದಲ್ಲಿಲ್ಲದ ಈ ಪದ್ಯವನ್ನು ಆರಿಸಿಕೊಂಡ ನೆಂಬುದಕ್ಕೆ ಇದೂ ಒಂದು ರೀತಿಯಿಂದ ಸಹಕಾರಿಯಾಗುವುದು.

ಈ ಶ್ರೀವಿಜಯನು ಈ ಕವಿಮಾರ್ಗವಲ್ಲದೆ ಬೇರೆ ಗ್ರಂಥಗಳನ್ನೂ ಬರೆದಿರುವಂತೆ ಊಹಿಸಲು ಅವಕಾಶವಿದೆ. ಮಂಗರಸನು ತನ್ನ ನೇಮಿಜಿನೇಶ ಸಂಗತಿಯಲ್ಲಿ, "ಕನ್ನಡ ಚಂಪೂಕಾವ್ಯಮಂ ಪೇಳ್ದ ಕವೀಶ್ವರರ ಪೇಳುವೆನು" ಎಂದು ಆರಂಭಿಸಿ, "ದೇವಚಂದ್ರ ಪ್ರಭರನು ಕೊಂಡಾಡಿದ ಶ್ರೀವಿಜಯರ" ಎಂದು ಹೇಳಿರುವುದನ್ನು, ಪಿರಿಯಪಟ್ಟಣದ ದೊಡ್ಡಯ್ಯನ "ಚಂದ್ರ ಪ್ರಭಾಪುರಾಣಮಂ ಪೇಳ್ದ ವಿಜಯ ಕವೀಂದ್ರ" ಎಂಬ ಹೇಳಿಕೆಯು ದೃಢಪಡಿಸುತ್ತದೆ. ಆದುದರಿಂದ ಈ ಶ್ರೀವಿಜಯನು ಕನ್ನಡದಲ್ಲಿ ಚಂದ್ರಪ್ರಭ ಪುರಾಣವೆಂಬ ಚಂಪೂಕಾವ್ಯವೊಂದನ್ನು ಬರೆದನೆಂದು ವ್ಯಕ್ತವಾಗುವುದು ಈಗ ಪ್ರಚಾರದಲ್ಲಿರುವ ಚಂದ್ರಪ್ರಭಪುರಾಣವು ಅಗ್ಗಳಕೃತವು. ಶ್ರೀವಿಜಯಕೃತಗ್ರಂಥವು ಇನ್ನೂ ದೊರಕಲಿಲ್ಲ. ಶಬ್ದಮಣಿದರ್ಪಣದಲ್ಲೂ, ಕಾವ್ಯಾವಲೋಕನದಲ್ಲೂ ನೃಪತುಂಗಭೂಪನನ್ನು ಸ್ತುತಿಸುವ ನಾಲ್ಕಾರುಪದ್ಯಗಳು ದೊರಕುವುವು. ಇದರಿಂದ ವಿಜಯನು ನೃಪತುಂಗ ನನ್ನುದ್ದೇಶಿಸಿ ಒಂದುಕಾವ್ಯವನ್ನು ಬರೆದಿರಬಹುದೆಂದು ಉಹಿಸಲೂ ಅವಕಾಶವುಂಟು. ಕೇಶಿರಾಜನು ಈತನನ್ನು ಪೂರ್ವ ಕವಿಗಳಾದ ಅಸಗ, ಮೊದಲಾದ ಪ್ರಾಚೀನ ಕವಿಗೋಷ್ಠಿಯಲ್ಲಿ ಸೇರಿಸಿರುವುದರಿಂದಲೂ, ಈಕವಿರಾಜ ಮಾರ್ಗದಲ್ಲಿ "ಪರಮ ಶ್ರೀವಿಜಯ" ಎಂಬಲ್ಲಿ "ಪರಮ" (ಶ್ರೇಷ್ಠವಾದ) ಎಂಬ ವಿಶೇಷಣವು ಇರುವುದರಿಂದಲೂ, ದುರ್ಗಸಿಂಹನ "ಶ್ರೀವಿಜ

ಧುರ ಕವಿಮಾರ್ಗಂ'' ಎಂಬ ಬಹುವಚನಪ್ರಯೋಗದಿಂದಲೂ, ಈತನು ಪ್ರಸಿದ್ಧ ನಾದ ಒಬ್ಬ ಆಚಾರ್ಯನಾಗಿದ್ದನೆಂದೂ, ನಾವು ಹೇಳಬಹುದು.

ಈ ಕವಿರಾಜಮಾರ್ಗದಲ್ಲಿ "ಪರಮಕವೀಶ್ವರರ್ಕೃತಕಾಚಾರಪರರ್; ಪರಮಕವಿ ವೃಷಭರ್ಕ್ಕಳ್; ಪರಮಕವಿ ಪ್ರಧಾನರಾಕಾವ್ಯಂಗಳ್; ಪರಮಾಚಾರ್ಯರ ವೋಲ್ಸಯ್ತಿರಲ್; ಪರಮಾಚಾರ್ಯರ್......ವಿಕ್ಕರ್; ಪರಮಕವೀಶ ಪ್ರಯೋಗ ಗತಮಾರ್ಗ" ಎಂಬ ಪದಗಳು ದೊರಕುವುದರಿಂದ, ಈಕವಿರಾಜಮಾರ್ಗಕರ್ತೃವು ತನ್ನ ಗ್ರಂಥಕ್ಕೆ ಆಧಾರ ಭೂತವಾದ ಕವಿಮಾರ್ಗಗ್ರಂಥವನ್ನು ಬರೆದಿದ್ದ ಪರಮ ಶ್ರೀವಿಜಯನನ್ನೇ ಈಪದಗಳಿಂದ ಸೂಚಿಸಿರುವನೆಂದೂ ತಿಳಿದುಬರುವುದರಿಂದ, ಈ ಶ್ರೀವಿಜಯನು ಕವಿರಾಜಮಾರ್ಗಗ್ರಂಥಕರ್ತೃವಿಗೆ ಒಂದುವೇಳೆ ಗುರುವಾಗಿದ್ದರೂ ಇರಬಹುದು ಎಂದು ನಾವು ತಿಳಿಯಬಹುದು.

ಈ ಕವಿರಾಜಮಾರ್ಗದಲ್ಲಿ ಹೇಳಿರುವ "ಅಱಿಪುವೆಂ ತದ್ಭವದೊಳ್" ಎಂಬ ಪದ್ಯದಲ್ಲಿ ತದ್ಭವ ಶಬ್ದಕ್ಕೆ ತತ್ಸಮ ತದ್ಭವ ಶಬ್ದವೆಂದು ಅರ್ಥಮಾಡುವುದು ಅಪ್ರಾಕರಣಿಕ ವಾದುದು. ಹಿಂದೆ ದಕ್ಷಿಣೋತ್ತರಮಾರ್ಗಗಳ ಲಕ್ಷಣವನ್ನು ಹೇಳಿರುವುದರಿಂದ ಈ ಪದ್ಯದ ಉತ್ತರಾರ್ಧದಲ್ಲಿ "ಅದನ್ನು ಅತಿಶಯಧವಳೋಕ್ತಿ ಕ್ರಮದಿಂ ಅಱಿಪುವೆಂ" ಎಂದು ಇಷ್ಟನ್ನೇ ಹೇಳಬೇಕಾಗಿರುವಾಗ "ಅದನ್ನು" ಎಂಬುದಕ್ಕೆ ಬದಲಾಗಿ ಅದರಲ್ಲಿ ಹುಟ್ಟಿದ ಎಂಬ ಕ್ಲಿಷ್ಟಾನ್ವಯವುಳ್ಳ (ತದ್ಭವದೊಳ್) ಶಬ್ದವನ್ನು ಪ್ರಯೋಗಿಸಿರುವ ಈಕವಿಯು ಆಮಾರ್ಗದ್ವಯಲಕ್ಷಣ ವನ್ನು ಅತಿಶಯಧವಳೋಕ್ತಿ ಕ್ರಮದಲ್ಲಿ (ತತ್) ಆಕವಿಮಾರ್ಗದಿಂದ(ಭವದೊಳ್) ಹುಟ್ಟಿದ ಈ ಗ್ರಂಥದಲ್ಲಿ ಹೇಳುವೆನು ಎಂಬ ನಿಜತತ್ವಾಂಶವನ್ನು ಇಲ್ಲಿ ಸೂಚಿ ಸುವನೆಂದು ತಾತ್ಪರ್ಯವನ್ನು ಹೇಳಬಹುದು. ಈಗ್ರಂಥಕ್ಕೆ ಮೂಲ ಗ್ರಂಥವು ಮತ್ತೊಂದಿತ್ತೆಂದು ಸೂಚಿಸುವ ಇದುಕೂಡ, ಶ್ರೀವಿಜಯನ ಕವಿಮಾರ್ಗವೆಂಬ ಗ್ರಂಥವನ್ನು ಈಕವಿರಾಜಮಾರ್ಗ ಗ್ರಂಥವು ಅನುಸರಿಸಿದೆ ಎಂಬುದನ್ನು ತಿಳಿಸುವು ದರಮೂಲಕ ಕವಿಮಾರ್ಗದ ಅಸ್ತಿತ್ವಕ್ಕೆ ಸಹಕಾರಿಯಾಗುವುದು.

ಈಗ ನಾವು ಒಟ್ಟಿನಲ್ಲಿ, ಈಕವಿರಾಜಮಾರ್ಗ ಗ್ರಂಥದಲ್ಲಿ ದೊರೆವ "ಶ್ರೀ ವಿಶದವರ್ಣೆ'' ''ಪರಮ ಶ್ರೀವಿಜಯಕವೀಶ್ವರ'' ''ಪರಮಾಲಂಕಾರೋಚಿತ...... ಪರಮಕವೀಶ್ವರರ" ಎಂಬ ಪದ್ಯಗಳೂ, ಅಲ್ಲಲ್ಲಿ ದೊರಕುವ ಪರಮಾಚಾರ್ಯ, ಪರಮ ಕವೀಶ್ವರ ಮೊದಲಾದ ಪದಗಳೂ, ಪರಿಚ್ಛೇದಾಂತ್ಯಗಳ ''ಶ್ರೀವಿಜಯಪ್ರಭೂತ'' ಎಂಬ ಪದ್ಯಗಳೂ, ಗ್ರಂಥೋಪಸಂಹಾರದಲ್ಲಿರುವ "ಅನ್ಯಮಾರ್ಗಲಕ್ಷಣಂ'' ಎಂಬ

ವಚನವೂ, ಕೇಶಿರಾಜನ ಪೂರ್ವಕವಿಸ್ತುತಿರೂಪವಾದ "ಗಜಗನ ಗುಣನಂದಿಯ..." ಎಂಬ ಪದ್ಯವೂ, ಆತನೇ ಲಕ್ಷ್ಯನಲ್ಲಿ ಉದಾಹರಿಸಿರುವ "ಬರಿಸಿ ಪ್ರಧಾನರಂ" "ಅರಸುಕುಮಾರನ" "ನುಡಿಗೆಲ್ಲಂ ಸಲ್ಲಿವ" ಈಪದ್ಯಗಳೂ, "ಶ್ರೀವಿಜಯರ ಕವಿಮಾರ್ಗಂ" ಎಂಬ ದುರ್ಗಸಿಂಹನ ಉಕ್ತಿಯೂ, ಶ್ರೀವಿಜಯನು ಕವಿಮಾರ್ಗವೆಂಬ ಲಕ್ಷಣಗ್ರಂಥವೊಂದವನ್ನು ಬರೆದಿರುವನೆಂದು ವ್ಯಕ್ತಪಡಿಸುವುವು. ದೊಡ್ಡಯ್ಯ ಮತ್ತು ಮಂಗರಸರು ಹೇಳುವಂತೆ, ಈಶ್ರೀವಿಜಯನೇ ಚಂಪ್ರಪ್ರಭ ಪುರಾಣವೆಂಬ ಮತ್ತೊಂದು ಕಾವ್ಯವನ್ನು ಬರೆದಿರುವನೆಂದೂ, ಈತನು ಜೈನನೆಂದೂ, ಕವಿರಾಜಮಾರ್ಗ ಕರ್ತೃವಿಗೆ ಒಂದು ವೇಳೆ ಗುರುವಾಗಿದ್ದರೂ ಇರಬಹುದೆಂದೂ ತಿಳಿದುಬರುವುದು,

(2) ಕವೀಶ್ವರಕೃತ ಕವಿರಾಜಮಾರ್ಗ.

ಈಕವಿರಾಜಮಾರ್ಗದಲ್ಲಿ ಪದ್ಯಗ್ರಂಥಕರ್ತೃಗಳ ಹೆಸರನ್ನು ಹೇಳುವ "ಪರಮ ಶ್ರೀವಿಜಯ ಕವೀಶ್ವರ ಪಂಡಿತ......" ಎಂಬ ಪದ್ಯದಿಂದ "ಕವೀಶ್ವರ" ಎಂಬ ಒಬ್ಬಕವಿಯು ಇದ್ದನೆಂದು ಗೊತ್ತಾಗುವುದು. ಇದೇ ಗ್ರಂಥದ ಎರಡನೆಯ ಪರಿಚ್ಛೇದದ ಕೊನೆಯಲ್ಲಿಯ "ಶ್ರೀವಿಜಯಪ್ರಭೂತಮನಿದಂ ತನಗಾಗಿಸಿದೊಂ ಕವೀಶ್ವರಂ" ಎಂಬಪದ್ಯಭಾಗದಿಂದ ಕವೀಶ್ವರನೆಂಬುವನು ಶ್ರೀವಿಜಯಕರ್ತೃಕನಾದ ಈಗ್ರಂಥವನ್ನು ತನ್ನ ಪ್ರಯೋಜನಕ್ಕಾಗಿ ಉಪಯೋಗಿಸಿಕೊಂಡನು, ಎಂಬ ಅರ್ಥವು ತೋರಿಬರುವುದರಿಂದ, ಕವೀಶ್ವರನೆಂಬ ಕವಿಯೊಬ್ಬನು ಶ್ರೀವಿಜಯಕೃತ ಕವಿಮಾರ್ಗವನ್ನು, ಅರಸನಾದ ನೃಪತುಂಗನಿಂದ ಪ್ರಯೋಜನವಡೆವುದಕ್ಕಾಗಿ ಉಪಯೋಗಿಸಿಕೊಂಡನೆಂದು ಹೇಳಬಹುದಾದುದಾಗಿ, ಕವಿರಾಜಮಾರ್ಗವು ಕವೀಶ್ವರಕೃತವೆಂದು ಹೇಳಿದಂತಾಗುವುದು. ಅಲ್ಲದೆ ಈ ಗ್ರಂಥದ "ಕವಿರಾಜಮಾರ್ಗ" ಎಂಬ ಹೆಸರೂ ಕೂಡ "ಕವೀಶ್ವರಮಾರ್ಗ" ಎಂಬುದಕ್ಕೆ ಸಂವಾದಿಯಾಗುವುದರಿಂದ ಈ ಗ್ರಂಥವನ್ನು ಕವೀಶ್ವರನೇ ಬರೆದನೆಂದು ಸೂಚಿತವಾಗುವುದು, 'ಕವಿರಾಜಮಾರ್ಗ' ಶಬ್ದಕ್ಕೆ ಕವಿಗಳ ರಾಜಮಾರ್ಗ ಅಥವಾ ಕವಿಶ್ರೇಷ್ಠರ ಮಾರ್ಗ ಎಂಬ ಎರಡು ಅರ್ಥಗಳು ಇರುವುದಾದರೂ, ಕವಿಯು ತನ್ನ ಹೆಸರನ್ನು ಕವಿರಾಜ (ಕವೀಶ್ವರ) ಎಂಬ ಈಶಬ್ದದಿಂದ ಸೂಚಿಸಿರುವನೆಂದೇ ಹೇಳಬಹುದು. ಮಂಗಳ ಪದ್ಯಗಳ ತರುವಾಯ ನೃಪತುಂಗನ ಸಭಾಸದರನ್ನು ಎರಡು ಪದ್ಯಗಳಿಂದ ವರ್ಣಿಸಿರುವುದೂ, ಗ್ರಂಥದ ಉಪಸಂಹಾರ ಸ್ಥಳಗಳಲ್ಲಿ 'ನೃಪತುಂಗಸಭಾಸದಂ" ಎಂದು ಏಕವಚನದಲ್ಲಿ ನೃಪತುಂಗನ ಸಭಾಸದನೊಬ್ಬನನ್ನು ವರ್ಣಿಸಿರುವುದೂ, "ನೃಪತುಂಗ ಸಭಾಸದರ್" ಎಂಬ ಪದ್ಯದಲ್ಲಿ "ಉದಾರ ಕವೀಶ್ವರಂ" ಎಂಬ ಬೇರೆಯ ಪಾಠವು ದೊರಕುವುದೂ, ಈ ಕವೀಶ್ವರನು ನೃಪತುಂಗಸಭಾಸದನೆಂಬುದನ್ನು

ಸೂಚಿಸುತ್ತವೆ ಅಲ್ಲದೆ, ಈ ಕವಿಯು ಅಲ್ಲಲ್ಲಿ, "ನೃಪತುಂಗಮಾರ್ಗ" ಎಂದು ಹೇಳಿರುವಂತೆ 'ಪರಮಕವೀಶಪ್ರಯೋಗಗತಮಾರ್ಗ' (II-46) ಎಂದೂ ಹೇಳಿರುವು ದರಿಂದ ಕವೀಶ್ವರನಾದ ತಾನು ಈಕವಿರಾಜಮಾರ್ಗವನ್ನು ಬರೆದನೆಂಬ ಅಭಿಪ್ರಾಯವನ್ನೇ ಅಲ್ಲಲ್ಲಿ ಸೂಚಿಸಿರುವನೆಂದು ಹೇಳುವುದೂ ಅನುಚಿತವಾಗಲಾರದು.

ಈ ಗ್ರಂಥದ "ಪರಮ ಶ್ರೀವಿಜಯ ಕವೀಶ್ವರ......" ಎಂಬ ಪದ್ಯದಲ್ಲಿ ಹೇಳಿರುವ "ತದಾದ್ಯಕಾವ್ಯಕ್ಕೆಂದುಂ ಲಕ್ಷ್ಯಂ" ಎಂಬ ಭಾಗಕ್ಕೆ, ಪ್ರಾಚೀನ ಗ್ರಂಥಕಾರರೆಂದು ಅರ್ಥವಾಗುವಕಾರಣ ಪ್ರಕೃತಕವೀಶ್ವರನು ತನ್ನಹೆಸರನ್ನೂ ಶ್ರೀ ವಿಜಯನ ಹೆಸರನ್ನೂ ಈ ಪ್ರಾಚೀನಕವಿಗೋಷ್ಠಿಯಲ್ಲಿ ಸೇರಿಸಿರುವುದು ಅನುಚಿತವಾದುದೆಂದು ಪೂರ್ವಪಕ್ಷಮಾಡಬಹುದು, ಆದರೆ "ತದಾದ್ಯ" ಶಬ್ದಕ್ಕೆ ಅರ್ಥವನ್ನುಮಾಡುವಾಗ, ಈ ಪದ್ಯದ ಸಂಪೂರ್ಣವಾದ ಅರ್ಥವನ್ನೂ ಪ್ರಕರಣವನ್ನೂ ವಿಚಾರಮಾಡಬೇಕಾಗಿದೆ. ಈ ಪದ್ಯವು ಪದ್ಯಕಾವ್ಯಗಳ ಲಕ್ಷಣವನ್ನೂ, ಸಂಸ್ಕೃತಪದ್ಯಕಾವ್ಯಕರ್ತೃಗಳ ಹೆಸರುಗಳನ್ನೂ, ಕನ್ನಡದ ಚತ್ತಾಣ, ಬೆದಂಡೆ ಎಂಬಕಾವ್ಯಭೇದಗಳ ಹೆಸರನ್ನೂ, ಹೇಳಿದ ಮೇಲೆ ಬಂದಿದೆ. ಪದ್ಯಲಕ್ಷಣವನ್ನು ಹೇಳುವ "ಪದ್ಯಂ ಪಾರಾಯಣಮಾದ್ಯಂ ಸದ್ವೃತ್ತಿವೃತ್ತಜಾತ್ಯಾಯತ್ತಂ" ಎಂಬ ಪದ್ಯದಲ್ಲಿ ಪದ್ಯಶಬ್ದಕ್ಕೆ "ಆದ್ಯ" ಎಂಬ ವಿಶೇಷಣವು ಇರುವುದು. ಪದ್ಯಕಾವ್ಯಕ್ಕೆ ಲಕ್ಷ್ಯವನ್ನು ಹೇಳುವ ಈಪದ್ಯದಲ್ಲಿಯೂ ಕೂಡ "ಆದ್ಯ"ಶಬ್ದಕ್ಕೆ ಹಿಂದಣ ಲಕ್ಷಣಪದ್ಯದ "ಆದ್ಯ"ಶಬ್ದದೊಡನೆ ಹೋಲಿಸಿ ಅರ್ಥ ಹೇಳುವುದು ಯುಕ್ತವೇ ಹೊರತು ಅದಕ್ಕೆ ವಿರುದ್ಧವಾಗಿ ಅರ್ಥ ಹೇಳುವುದು ಸಮಂಜಸವಲ್ಲ. "ತದಾದ್ಯ" ಶಬ್ದದಲ್ಲಿರುವ "ತತ್"ಶಬ್ದಕ್ಕೆ ಪ್ರಸಿದ್ಧಾರ್ಥಕ್ಕಿಂತಲೂ, ಪೂರ್ವಪರಾಮರ್ಶಕಾರ್ಥವನ್ನು ಹೇಳುವುದೇ ಪ್ರಕರಣೋಚಿತವಾದುದು, ಆದುದರಿಂದ "ತದಾದ್ಯ ಕಾವ್ಯ" ಶಬ್ದಕ್ಕೆ, ಹಿಂದೆ ಹೇಳಿದ ಪದ್ಯಗಳಿಂದ ಕೂಡಿದ ಕಾವ್ಯವೆಂದು ಅರ್ಥಮಾಡಬೇಕಲ್ಲದೆ "ತದಾದ್ಯಕಾವ್ಯಕ್ಕೆ" ಆಪ್ರಾಚೀನರ ಕಾವ್ಯಕ್ಕೆ, ಎಂದು ಅರ್ಥವನ್ನು ಮಾಡುವುದು ಉಚಿತವಾಗಿರುವುದಿಲ್ಲ. ಪ್ರಕೃತದಲ್ಲಿ ಪ್ರಾಚೀನ ಅರ್ವಾಚೀನ ಎಂಬ ಪ್ರಸಕ್ತಿಯೇ ಬಂದಿರುವುದಿಲ್ಲ. "ಪರಮ ಶ್ರೀವಿ ಜಯ...........ಲೋಕಪಾಲಾದಿಗಳ ಆ ನಿರತಿಶಯವಸ್ತು ವಿಸ್ತರರಚನೆ ತದಾದ್ಯಕಾವ್ಯಕ್ಕೆ ಲಕ್ಷ್ಯಂ "ಎಂಬ ಅನ್ವಯದಲ್ಲಿ" ಪರಮ ಶ್ರೀವಿಜಯ ಮೊದಲಾದವರುಗಳ ನಿರತಿಶಯವಾದ ವಸ್ತುವಿಸ್ತರ ರಚನೆಯು ಅಪೂರ್ವಿಕರ ಕಾವ್ಯಕ್ಕೆ ಲಕ್ಷ್ಯವಾಗಿರುವುದು" ಎಂದು ಅರ್ಥಮಾಡುವುದು ಅಪ್ರಸ್ತುತವೂ, ಅನನ್ವಿತವೂ ಆಗುವುದು. ಮೇಲೆ ಹೇಳಿದ ಈ ವಿಚಾರಗಳಿಂದ ಪರಮ ಶ್ರೀವಿಜಯಕವೀಶ್ವರರು ಪದ್ಯಗ್ರಂಥಕರ್ತರೆಂದು ಅರ್ಥಮಾಡಬೇಕಲ್ಲವೇ

ಪ್ರಾಚೀನಗ್ರಂಥಕರ್ತರೆಂದು ಅರ್ಥಮಾಡಕೂಡದು. ಕವೀಶ್ವರನೆಂಬ ಕವಿಯು ತನ್ನ ಗುರುವಾದ ಶ್ರೀವಿಜಯನನ್ನೂ ತನ್ನನ್ನೂ ಇತರಪದ್ಯಗ್ರಂಥಕರ್ತೃಗಳ ಗೋಷ್ಠಿಯಲ್ಲಿ ಸೇರಿಸಿ ಪ್ರಕೃತ ಗ್ರಂಥದಲ್ಲಿ ಹೇಳಿಕೊಂಡಿರುವನೆಂದು ಹೇಳುವುದರಲ್ಲಿ ಯಾವ ಅನುಪಪತ್ತಿಯೂ ಇರಲಾರದು.

ಕಾವ್ಯಾವಲೋಕನದಲ್ಲಿಯೂ ಶಬ್ದಮಣಿದರ್ಪಣದಲ್ಲಿಯೂ, ನೃಪತುಂಗನ ಶೌರ್ಯ್ಯೌದಾರ್ಯ್ಯಾದಿ ಗುಣಗಳನ್ನು ವರ್ಣಿಸಿರುವ ಕೆಲವು ಪದ್ಯಗಳು ದೊರಕುವುವು, ಪ್ರಾಯಃ ಈಕವಿಯೇ ತನ್ನ ಆಶ್ರಯದಾತನಾದ ನೃಪತುಂಗನ ಹೆಸರಿನಲ್ಲಿ ಈಕವಿರಾಜಮಾರ್ಗವನ್ನು ಬರೆದುದೂ ಅಲ್ಲದೆ, ಅವನನ್ನೇ ಉದ್ದೇಶಿಸಿ ಬರೆದಿದ್ದ ಮತ್ತೊಂದು ಪದ್ಯ ಗ್ರಂಥದಿಂದಲೇ ಆ ಪದ್ಯಗಳು ಉದ್ಧೃತವಾಗಿದ್ದರೂ ಇರಬಹುದೆಂದು ನಾವು ಊಹಿಸಬಹುದು. ಈ ಕಾರಣದಿಂದಲೇ ಕವೀಶ್ವರನು ತನ್ನನ್ನು ಪದ್ಯಗ್ರಂಥಕರ್ತೃಗಳ ಗುಂಪಿನಲ್ಲಿ ಸೇರಿಸಿ ಹೇಳಿಕೊಂಡಿರುವನೆಂದು ಊಹಿಸಲೂ ಹೆಚ್ಚಿನ ಅವಕಾಶವುಂಟು. ಜೈನಮತದವನಾದ ಈ ಕವಿಯು ಪಂಪ, ರನ್ನರಂತೆ ಮಂಗಳಪದ್ಯದಲ್ಲಿ ತನ್ನ ಆಶ್ರಯದಾತನನ್ನು ವಿಷ್ಣುವಿಗೆ ಹೋಲಿಸಿ ವರ್ಣಿಸಿರುವನೆಂದು ಹೇಳುವುದೂ ಅಸಮಂಜಸವಾಗಲಾರದು. ನಾವು ಹಿಂದೆ ಹೇಳಿದಂತೆ ಮೊದಲು ದಂಡಿಯ ಕಾವ್ಯಾದರ್ಶವನ್ನು ಸಂಪೂರ್ಣವಾಗಿ ಅನುಸರಿಸಿ ಬರೆದಿದ್ದ ಕವಿಮಾರ್ಗದ ಸಂಸ್ಕೃತಾನುಗುಣವಾಗಿದ್ದ ದಕ್ಷಿಣೋತ್ತರಮಾರ್ಗಲಕ್ಷಣಗಳ ಜತೆಗೆ ಕವೀಶ್ವರನು ಕನ್ನಡಭಾಷೆಗೆ ಸಂಬಂಧಪಟ್ಟ ಕೆಲವು ಭಾಗಗಳನ್ನು ಸೇರಿಸಿಯೂ, ದೋಷಪ್ರಕರಣದಲ್ಲಿ, ಭಾಮಹನ ಅಲಂಕಾರ ಗ್ರಂಥದಿಂದ ಕೆಲವುಭಾಗಗಳನ್ನು ತೆಗೆದು ಸೇರಿಸಿಯೂ, ಪ್ರಾಸಾದಿಗಳ ವಿಷಯದಲ್ಲಿ ಕೆಲವನ್ನು ಬಿಟ್ಟೂ, ಇನ್ನು ಕೆಲವನ್ನು "ಅನ್ಯಮಾರ್ಗಲಕ್ಷಣಂ" ಎಂದುಹೇಳಿಯೂ, ಅಲಂಕಾರಪ್ರಕರಣದಲ್ಲಿ, ಅಲಂಕಾರಗಳ ಆಂತರಾಳಿಕ ಭೇದಗಳಲ್ಲಿ ಕೆಲವನ್ನು ಬಿಟ್ಟೂ, ಒಂದೆರಡನ್ನು ಹೆಚ್ಚಾಗಿ ಸೇರಿಸಿಯೂ. ಈ ಕವಿರಾಜಮಾರ್ಗವನ್ನು ಬರೆದಿರುವನೆಂದು ಹೇಳಬಹುದು. ಈ ಗ್ರಂಥದ ಕೆಲವು ಲಕ್ಷ್ಯಪದ್ಯಗಳಲ್ಲಿ, ಒಬ್ಬ ರಾಜನನ್ನು ಕುರಿತು "ನೀನು" "ನಿನ್ನ" ಎಂದು ಮೊದಲಾಗಿ ಸಂಬೋಧಿಸಿ, ಆತನ ಶೌರ್ಯ್ಯೌದಾರ್ಯ್ಯಾದಿಗುಣಗಳ ವರ್ಣನೆಯೂ, ಮತ್ತೆ ಕೆಲವು ಪದ್ಯಗಳಲ್ಲಿ ನೃಪತುಂಗ, ಅತಿಶಯಧವಳ, ವೀರನಾರಾಯಣ, ಎಂಬ ಬಿರುದುಳ್ಳ ಅಮೋಘವರ್ಷನ ಸ್ತುತಿಯೂ ಇರುವುದರಿಂದ, ಆಸ್ಥಾನ ಕವಿಯಾದ ಈ ಕವೀಶ್ವರನು ತನ್ನ ಆಶ್ರಯದಾತನಾದ ನೃಪತುಂಗನ ಸ್ತುತಿಪದ್ಯಗಳನ್ನೂ ತಾನು ಬರೆದ ಅಲಂಕಾರಗ್ರಂಥದೊಳಗೆ ಅಲ್ಲಲ್ಲಿ ಲಕ್ಷ್ಯವಾಗಿ ಉದಾಹರಿಸಿರುವನೆಂದು ಹೇಳುವುದೂ ಸಮಂಜಸವಾಗುವುದು.

ಈ ಕವಿಯು, ಪ್ರಾಚೀನಾಲಂಕಾರಿಕರಾದ ಭಾಮಹ, ದಂಡಿ, ಇವರುಗಳ ಗ್ರಂಥಗಳಿಂದ ಆವಾವ ವಿಷಯವನ್ನು ಆರಿಸಿ ಪರಿವರ್ತಿಸಿರುವನೆಂಬುದನ್ನು ಮುಂದೆ ಅನುಬಂಧದಲ್ಲಿ ತಿಳಿಸುತ್ತೇವೆ.



## (3) ನೃಪತುಂಗಾನುಮತ ಕವಿರಾಜಮಾರ್ಗ

ಅಥವಾ

## —(•) ನೃಪತುಂಗ ಗ್ರಂಥ (•)—

ನೃಪತುಂಗನಿಂದ ಈ ಕವಿರಾಜಮಾರ್ಗವು ರಚಿತವಾಗದಿದ್ದರೂ, ಈ ಗ್ರಂಥದಲ್ಲಿ ಅಲ್ಲಲ್ಲಿ ದೊರಕುವ, ನೃಪತುಂಗನೇ ಈ ಗ್ರಂಥವನ್ನು ರಚಿಸಿದನೆಂಬ ಉಕ್ತಿಗಳಿಗೂ, ಶಬ್ದಾನುಶಾಸನಕಾರನು ಇದನ್ನೇ ನೃಪತುಂಗ ಗ್ರಂಥವೆಂದು ಹೇಳಿರುವುದಕ್ಕೂ ಉಪಪತ್ತಿಯು ಹಿಂದಿನ ವಿಮರ್ಶೆಗಳಿಂದಲೇ ಸ್ಪಷ್ಟವಾಗಿರುವುದು. ಹೀಗೆ ಈ ಕವಿರಾಜಮಾರ್ಗ ಗ್ರಂಥಕರ್ತನಿಗೆ ವಿಶೇಷ ಪ್ರೋತ್ಸಾಹಕನೂ ಆಶ್ರಯದಾತನೂ ಆದ ಈ ನೃಪತುಂಗನ ವಿಷಯವನ್ನು ಈ ಗ್ರಂಥದ ಮತ್ತು ಇತರ ಸಾಧನಗಳ ಸಹಾಯದಿಂದ ವಿಚಾರಮಾಡುವೆವು.

ಈನೃಪತುಂಗನಿಗೆ ಉದಾರ, ನೀತಿನಿರಂತರ, ಕೃತಕೃತ್ಯಮಲ್ಲ, ವೀರ ನಾರಾಯಣ, ಅತಿಶಯಧವಳ, ವಿವೇಕಬೃಹಸ್ಪತಿ, ನರಲೋಕಚಂದ್ರ, ನಿತ್ಯಮಲ್ಲವಲ್ಲಭ, ಪುರುಷೋತ್ತಮ, ವಾಗಧಿಪ, ಪರಮೋದಯ, ಅಮೋಘವರ್ಷ, ಸರಸ್ವತೀತೀರ್ಥಾವತಾರ, ಎಂಬ ಬಿರುದುಗಳಿದ್ದಂತೆ ತಿಳಿದುಬರುವುದು. ಈ ಗ್ರಂಥದಲ್ಲಿ ಅಲ್ಲಲ್ಲೇ ಅಖಿಳ ಧರಾವಲ್ಲಭ, ಅತಿಶಯಧವಳೋರ್ವಿಪ, ಎಂದು ಹೇಳಿರುವುದರಿಂದ, ಈ ನೃಪತುಂಗನು ಸಾರ್ವಭೌಮನಾಗಿದ್ದನೆಂದೂ ತಿಳಿದು ಬರುವುದು. ಈ ಬಿರುದುಗಳಲ್ಲಿ, ವೀರ ನಾರಾಯಣ, ವರ್ಷ-ವಲ್ಲಭ, ಎಂಬಬಿರುದುಗಳು ಕರ್ಣಾಟಕ ರಾಜದಲ್ಲಿ ಕ್ರಿ.ಶ. ಏಳನೆಯ ಶತಮಾನದಿಂದ ಹತ್ತನೆಯ ಶತಮಾನದವರೆಗೂ ಸಾರ್ವಭೌಮರಾಗಿ ಆಳಿದ ರಾಷ್ಟ್ರಕೂಟ ರಾಜರಿಗೆ ಸಂಬಂಧಿಸಿರುವುದರಿಂದ, ಈ ಗ್ರಂಥದಲ್ಲಿ ಉಕ್ತನಾದ ರಾಜನೂ ರಾಷ್ಟ್ರಕೂಟದ ಅರಸರ ವಂಶದವನೆಂದು ಹೇಳುವುದರಲ್ಲಿ ಸಂದೇಹವೇ ಇಲ್ಲ. "ಹಿರಣ್ಯಾಕ್ಷನಿಂದ ಅಪಹೃತವಾಗಿದ್ದ ಭೂಮಿಯನ್ನು ಶ್ರೀಮನ್ನಾರಾಯಣನು ವರಾಹಾವತಾರವನ್ನೆತ್ತಿ ಉದ್ಧಾರಮಾಡಿದಂತೆ ಈ ವಂಶದ ಮೂಲಪುರುಷ [illegible] ಅಪಹೃತವಾಗಿದ್ದ ಭೂಮಿಯನ್ನು ಮತ್ತೆ ತಾನು

ವಶಮಾಡಿಕೊಂಡುದರಿಂದ 'ವೀರನಾರಾಯಣ' ನೆಂಬ ಬಿರುದನ್ನು ಪಡೆದನು'' ಎಂದೂ ಈಬಿರುದುಗಳು ಇವನಿಗೆಮಾತ್ರವಲ್ಲದೆ ಇವನ ವಂಶದವರಿಗೂ ಇದ್ದಿತೆಂದೂ ಶಾಸನಗಳಿಂದ ತಿಳಿದುಬರುವುದು. ಈತನ ಹಿಂದೆ ಆಳಿದ ಅರಸರಿಗೆ ಪ್ರಭೂತವರ್ಷ, ಅಕಾಲವರ್ಷ ಎಂಬ ಹೆಸರುಗಳಿದ್ದುದರಿಂದ, ಅಮೋಘವರ್ಷನೆಂಬುದೇ ಈತನ ಹೆಸರೆಂದೂ, ನೃಪತುಂಗ(ರಾಜರಲ್ಲಿ ಮೇಲಾದವನು)ನೆಂಬುದು ಈತನ ಬಿರುದೆಂದೂ ಕೆಲವರು ಹೇಳುವರು. ವರ್ಷಶಬ್ದಕ್ಕೆ ಮಳೆ ಎಂದು ಅರ್ಥವಾಗುವುದರಿಂದ, ಈ ವಂಶದ ಅರಸರು ಮಳೆಯಂತೆ ಅರ್ಥಿಗಳಲ್ಲಿ ದ್ರವ್ಯವನ್ನು ವರ್ಷಿಸಿ ಅವರ ಸಂತಾಪವನ್ನು ಅಡಗಿಸುತ್ತಿದ್ದರೆಂದು ಹೇಳಬಹುದಾದುದರಿಂದ, ''ವರ್ಷ'' ಎಂಬುದು ಕೂಡ ಇವರ ಬಿರುದೆಂದೇ ಹೇಳಿಬಿಡಬಹುದು. ಹಾಗೆಯೇ ''ವಲ್ಲಭ'' (ಪ್ರಿಯ) ಪ್ರಜೆಗಳಿಗೆ ಇಷ್ಟವನ್ನುಂಟುಮಾಡುವವನು ಅಥವಾ ಒಡೆಯ ಎಂಬ ಅರ್ಥದಿಂದ ಬಂದಿರಬಹುದೆಂದೂ ನಾವು ಊಹಿಸಬಹುದು.

ಈತನು ಸ್ವತಃ ವಿದ್ಯಾವಂತನಾಗಿದ್ದುದರಿಂದ ''ವಾಗಧಿಪ'' ''ವಿವೇಕ ಬೃಹಸ್ಪತಿ''''ಸರಸ್ವತೀ ತೀರ್ಥಾವತಾರ''ಎಂಬ ಬಿರುದುಗಳು ಬಂದಂತೆ ಕಾಣುತ್ತದೆ.(1) ಇವನಿಂದ ರಚಿತವಾದ ''ಪ್ರಶ್ನೋತ್ತರಮಾಲಿಕೆ'' ಎಂಬ ಸಂಸ್ಕೃತ ಗ್ರಂಥದ ಅಂತ್ಯದಲ್ಲಿರುವ 'ವಿವೇಕಾತ್ತ್ಯಕ್ತರಾಜ್ಯೇನ... ರಚಿತಾಽಮೋಘವರ್ಷೇಣ...'ಎಂಬ ಪದ್ಯವು ಈತನ ಪಾಂಡಿತ್ಯವನ್ನು ವ್ಯಕ್ತಪಡಿಸುವುದು. ಈತನು ಹೀಗೆ ಸ್ವತಃ ವಿದ್ಯಾವಂತನಾಗಿದ್ದುದರಿಂದಲೇ ಹಲವು ಮಂದಿ ಪಂಡಿತರಿಗೆ ಆಶ್ರಯನಾಗಿದ್ದನೆಂದೂ ತಿಳಿದುಬರುವುದು. ಕರ್ಣಾಟಕ ರಾಜ್ಯಾಧಿಪತಿಯಾಗಿದ್ದುದರಿಂದ ಕನ್ನಡಕ್ಕೆ ಈತನು ವಿಶೇಷಪ್ರೋತ್ಸಾಹವನ್ನು ಕೊಟ್ಟಿರಬೇಕು. ವೀರಾಚಾರ್ಯನೆಂಬ ಜೈನ ಕವಿಯು ತನ್ನ ಸಂಸ್ಕೃತಗಣಿತಸಾರಸಂಗ್ರಹದಲ್ಲಿ, ಅರ್ಹಂತನನ್ನು ಸ್ತುತಿಸುವ ಮಂಗಳ ಪದ್ಯಗಳಾದ ಮೇಲೆ, ಐದು ಪದ್ಯಗಳಿಂದ ಈ ನೃಪತುಂಗನನ್ನು ಹೊಗಳಿ, ಆಬಳಿಕ ಗ್ರಂಥವನ್ನು ಆರಂಭಿಸಿರುವನು. ಹೀಗೆ ಈತನು ತನ್ನ ಗ್ರಂಥದಲ್ಲಿ ನೃಪತುಂಗನನ್ನು ವರ್ಣಿಸಿರುವುದರಿಂದ, ನೃಪತುಂಗನು ಆತನಿಗೆ ವಿಶೇಷ ಪ್ರೋತ್ಸಾಹ

---

(1) ಕವಿಗಳು ತಮ್ಮ ಬಿರುದನ್ನೂ, ಹೆಸರನ್ನೂ ತಾವು ರಚಿಸುವ ಕಥಾ ನಾಯಕನಿಗೂ ತಮ್ಮ ಆಶ್ರಯದಾತರಿಗೂ ಉಪಯೋಗಿಸುವುದುಂಟು (ಅಭಿನವ ಪಂಪನಲ್ಲಿ ಇದು ಸ್ಪಷ್ಟವಾಗಿ ಕಂಡುಬರುವುದು) ಅದರಂತೆ ಈ ಬಿರುದುಗಳು ಕವಿಗೂ ಇದ್ದಿರಬಹುದು.

ವನ್ನು ಕೊಟ್ಟಿದ್ದನೆಂದೇ ಹೇಳಬಹುದು. ಈ ಪದ್ಯಗಳಲ್ಲಿ ಒಂದು, (1)"ಪ್ರೀಣಿತಃ... ಈತನ ಅಮೋಘವರ್ಷನೆಂಬ ಹೆಸರನ್ನೂ "ವಿದ್ವದೈಕಾಂತಪಕ್ಷಸ್ಯ..." ಎಂಬುದ ನೃಪತುಂಗನೆಂಬ ಮತ್ತೊಂದು ಬಿರುದನ್ನೂ ಸೂಚಿಸುವುದಲ್ಲದೆ "ಈತನು ಜೈನನೆ ಬುದನ್ನೂ ಸೂಚಿಸುವುದು. ಅಮೋಘವರ್ಷನ ಕಾಲಕ್ಕೆ, ರಾಷ್ಟ್ರಕೂಟ ರಾಜರು ಉಚ್ಛ್ರಿತರಾಜಪದವಿಗೆ ಬಂದು ಸುಮಾರು ಅರುವತ್ತು ವರುಷಗ ಮೇಲಾಗಿತ್ತು. ಕನ್ನಡನಾಡನ್ನು ಆಕ್ರಮಿಸುವ ಹೊತ್ತು ಮೊದಲಿಗೆ ನಾಸಿಕವ ಈರಾಜರಿಗೆ ರಾಜಾಧಾನಿಯಾಗಿದ್ದು ಅಮೋಘವರ್ಷನ ಕಾಲಕ್ಕೆ ರಾಜಧಾನಿಯು ನಾಸಿ ಕದಿಂದ ಮಾನ್ಯಖೇಟಕ್ಕೆ ಮಾರ್ಪಟ್ಟುದೆಂದು ಪಂಡಿತರು ಅಭಿಪ್ರಾಯಪಡುತ್ತಾರೆ ರಾಷ್ಟ್ರಕೂಟ ರಾಜರು ಕನ್ನಡನಾಡಿನಲ್ಲಿ ನೆಲಸಿ ವಾಸಮಾಡಲು ಮೊದಲ ಮಾಡಿದ ಈ ಅಲ್ಪಕಾಲದಲ್ಲಿ, ರಾಷ್ಟ್ರಕೂಟರಾಜನಾದ ಅಮೋಘವರ್ಷ(ನೃಪತುಂ ಗ)ನು ಅಷ್ಟುಬೇಗನೆ ಕನ್ನಡಭಾಷೆಯ ಮರ್ಮಗಳನ್ನು ತಿಳಿದು ಭಾಷೆಯನ್ನು ವ ಪಡಿಸಿಕೊಂಡು ಪ್ರೌಢವಾದ ಕವಿರಾಜ ಮಾರ್ಗದಂತಹ ಲಕ್ಷಣ ಗ್ರಂಥವನ್ನು ಬರ ದಿರ ಬಹುದೆಂದು ನಂಬಲು ನಮಗೆ ಅಷ್ಟುಧೈರ್ಯಸಾಲದು. ಹಾಗಾದರೆ ಭಾಷಾಭಿಜ್ಞ ನಲ್ಲದ ಈ ನೃಪತುಂಗನು ಕನ್ನಡ ಕವಿಗಳಿಗೆ ಏಕೆಪ್ರೋತ್ಸಾಹವನ್ನು ಕೊಡುತ್ತಿದ್ದ ನೆಂಬ ಪ್ರಶ್ನೆಯು ಬರಬಹುದು. ಕನ್ನಡನಾಡಿನ ರಾಜನಾದ ಈತನು ತನ್ನ ಆಸ್ಥಾನದಲ್ಲಿ ಸಂಸ್ಕೃತಕವಿಗಳಂತೆಯೇ ಕನ್ನಡ ನಾಡಿನ ಪ್ರಜೆಗಳ ಉಪಕಾರಕ್ಕಾಗಿ ಕನ್ನಡದಲ್ಲಿ ಗ್ರಂಥವನ್ನು ರಚಿಸುತ್ತಿದ್ದ ಕವಿಗಳಿಗೂ ಪ್ರೋತ್ಸಾಹವನ್ನು ಕೊಡುತ್ತಿದ್ದನೆಂಬ ಸಮಾಧಾನವೂ ಹಿಂದೆಯೇ ಸಿದ್ಧವಾಗಿರುವುದು.

ಹೀಗೆ ವಿದ್ಯಾವಂತನಾದ ಈತನ ಸಭೆಯಲ್ಲಿ ಹಲವು ಮಂದಿ ವಿದ್ಯಾವಂತರು ಸೇರಿ, ಆಗಾಗ ಶಾಸ್ತ್ರವಿಚಾರಗಳನ್ನು ನಡೆಸುತ್ತಿದ್ದರೆಂದು ನಾವು ಒಪ್ಪಿಕೊಳ್ಳಬ ಹುದು. ಇದುವರೆಗೆ ಭಾಮಹ, ದಂಡಿ, ಮೊದಲಾದ ಹಲವು ಆಲಂಕಾರಿಕರು ಹುಟ್ಟಿ ಕಾವ್ಯಾಲಂಕಾರ ವಿಷಯದಲ್ಲಿ ಭಿನ್ನ ಭಿನ್ನವಾದ ಮತವನ್ನು ಪ್ರಕಾಶಪಡಿಸಿ ಸಂಸ್ಕೃತ ಭಾಷೆಯಲ್ಲಿ ಹಲವು ಗ್ರಂಥಗಳನ್ನು ರಚಿಸಿದ್ದರು. ವಿದ್ಯಾವಂತ ನಾದ ಈ ಅರಸನು ತನ್ನ ಸಭೆಯ ಪಂಡಿತರ ಸಹಾಯದಿಂದ ಈ ಅಲಂ ಕಾರ ಶಾಸ್ತ್ರಗಳೆಲ್ಲವನ್ನೂ ಕ್ರೋಢೀಕರಿಸಿ, ತನ್ನ ಅಭಿಪ್ರಾಯವೊಂದನ್ನು ಸೂಚಿ

---

(1) ಪ್ರೀಣಿತಃ ಪ್ರಾಣಿಸಸ್ಯೌಘೋ ನಿರೀತಿರ್ನಿರವಗ್ರಹಃ ॥
ಶ್ರೀಮತಾಽಮೋಘವರ್ಷೇಣ ಯೇನ ಸ್ವೇಷ್ಟಹಿತೈಷಿಣಾ ॥
ವಿದ್ವದೈಕಾನ್ತಪಕ್ಷಸ್ಯ ಸ್ಯಾದ್ವಾದನ್ಯಾಯ ವೇದಿನಃ ॥
ದೇವಸ್ಯ ನೃಪತುಂಗಸ್ಯ ವರ್ಧತಾಂ ತಸ್ಯ ಶಾಸನಮ್ ॥

ಸಿಯೂ ಇರಬಹುದು. ಅಥವಾ ಸಂಸ್ಕೃತದಲ್ಲಿ "ನೃಪತುಂಗ ದೇವಮಾರ್ಗ" ಎಂಬ ಗ್ರಂಥವೊಂದನ್ನು ಬರೆದೂ ಇರಬಹುದು. ಈ ನೃಪತುಂಗನ ಅಭಿಪ್ರಾಯವನ್ನೋ ಅಥವಾ ಆತನ ಗ್ರಂಥವನ್ನೋ ಕ್ರೋಡೀಕರಿಸಿ, ಕವೀಶ್ವರನು ತನ್ನ ಕವಿರಾಜ ಮಾರ್ಗದಲ್ಲಿ ಆ ಅಭಿಪ್ರಾಯಗಳನ್ನು ಸೇರಿಸಿರಬಹುದೆಂದೂ ಊಹಿಸ ಬಹುದಾದುದ ರಿಂದ, ಈ ಕವಿರಾಜಮಾರ್ಗದಲ್ಲಿ ಅಲ್ಲಲ್ಲಿ ದೊರಕುವ "ನೃಪತುಂಗ ದೇವ ಮಾರ್ಗಾನುಗತ" ಎಂಬ ಶಬ್ದಾರ್ಥವೂ ಸಮಂಜಸವಾಗುವುದೆಂದು ಹೇಳ ಬಹುದು. ಆದರೆ ಈ ಊಹೆಗೆ ಇನ್ನೂ ಅಷ್ಟು ಪ್ರಬಲ ಕಾರಣಗಳು ದೊರೆತಿಲ್ಲ.

ಮೇಲೆ ಹೇಳಿದ ವೀರಸೇನಾಚಾರ್ಯನ ಉಕ್ತಿಯೂ, ಅರುವತ್ತೆರಡುವರ್ಷಗಳ ಕಾಲ ರಾಜ್ಯಭಾರಮಾಡಿದ ಈತನು, ಜೈನಮತದ ರಾಜರ ಪದ್ಧತಿಯಂತೆ ಹೇಯೂ ಪಾದೇಯ ಜ್ಞಾನಪೂರ್ವಕವಾಗಿ ರಾಜ್ಯವನ್ನು ಮಗನಿಗೆ ಒಪ್ಪಿಸಿ, ಜಿನದೀಕ್ಷೆಯನ್ನು ತೆಗೆದುಕೊಂಡನೆಂದು ಹೇಳುವ ಚರಿತ್ರೆಗಳಲ್ಲಿಯ ಚರಿತಾಂಶವೂ, ಸನಾತನಮ ತಾನುಯಾಯಿಗಳಾಗಿದ್ದ ರಾಷ್ಟ್ರಕೂಟದರಸರಲ್ಲಿ ಹೇಗೆ ಸಮಂಜಸವಾಗುವುದು ಎಂಬ ಶಂಕೆಯು ತೋರಬಹುದು. ರಾಷ್ಟ್ರಕೂಟವಂಶಕ್ಕೆ ಸೇರಿದ ಈ ಅರಸನು ತನ್ನ ವಂಶೀಯರಂತೆ ಆದಿಯಲ್ಲಿ ವೈದಿಕ ಮತಾನುಯಾಯಿಯಾಗಿದ್ದರೂ, ವಿದ್ವತ್ಪಕ್ಷಪಾತಿ ಯಾಗಿ ಎಲ್ಲ ಮತದ ಪಂಡಿತರನ್ನೂ ಪಕ್ಷಪಾತವಿಲ್ಲದೆ ಪ್ರೋತ್ಸಾಹಿಸುತ್ತಿದ್ದುದರಿಂದ ಬಹುದೀರ್ಘಕಾಲದ(೬೨ವರ್ಷಗಳು)ತನ್ನ ಆಳಿಕೆಯಲ್ಲಿ ಕನ್ನಡನಾಡಿನ ಜೈನಪಂಡಿತರ ಪ್ರಾಬಲ್ಯವು ಆಸ್ಥಾನದಲ್ಲಿ ಹೆಚ್ಚುತ್ತ ಬಂದುದರಿಂದ ಅವರಲ್ಲಿ ವಿಶೇಷವಾದ ಅಭಿ ಮಾನವುಂಟಾದುದರಿಂದ ಅವರಮತದಲ್ಲಿಯೂ ನಂಬಿಕೆಯು ಹೆಚ್ಚಲು ಜೈನಮತವನ್ನು ತನ್ನ ಆಳಿಕೆಯ ಮಧ್ಯಕಾಲದಲ್ಲಿಯೋ, ಅಪರಾರ್ಧದ ಮಧ್ಯದಲ್ಲಿಯೋ ಅವಲಂಬಿಸಿರ ಬೇಕು. ಈ ಕಾಲದಲ್ಲಿಯೇ ವೀರಸೇನಾಚಾರ್ಯನು ತನ್ನ ಗ್ರಂಥವನ್ನು ಬರೆದು ಈತ ನನ್ನು "ಸ್ಯಾದ್ವಾದನ್ಯಾಯವೇದಿ" ಎಂದು ವಿಶೇಷಿಸಿ ಜೈನಮತದವನೆಂದು ವರ್ಣಿ ಸಿರುವನು. ಅಂತ್ಯಕಾಲದಲ್ಲಿ ಈತನು ಜೈನಮತದ ದೃಢವಾದ ನಂಬಿಕೆಯಿಂದ ವೈರಾಗ್ಯದ ಮಾಹಾತ್ಮ್ಯವನ್ನು ಸೂಚಿಸುವ "ರತ್ನಮಾಲಿಕಾ" ಎಂಬ ಗ್ರಂಥವನ್ನು ಬರೆದು, ಜಿನದೀಕ್ಷೆಯನ್ನು ವಹಿಸಿದನು ಎಂದು ನಾವು ಊಹಿಸುವುದರಿಂದ ಎಲ್ಲವೂ ಸಮಂಜಸವಾಗಿಯೇ ಆಗುವುದು.

ಮ. ರಾ. ಎಂ. ಗೋವಿಂದ ಪೈಗಳವರು ಕರ್ಣಾಟಕ ಸಾಹಿತ್ಯ ಪರಿಷತ್ಪ ತ್ರಿಕೆಯಲ್ಲಿ, ಈ ನೃಪತುಂಗನ ಮತದ ವಿಷಯವನ್ನು ವಿಮರ್ಶೆಮಾಡಿ "ಆತನು ಕೊನೆಯವರೆಗೂ ಸನಾತನ ಧರ್ಮಾವಲಂಬಿಯಾಗಿದ್ದನೇ ಹೊರತು ಜೈನಮತ ವನ್ನು ಸ್ವೀಕರಿಸಲಿಲ್ಲ" ಎಂದು ಉಪಪಾದಿಸಿರುವರು. ಉಪಪಾದನಾಕ್ರಮದಲ್ಲಿ

ಇವರು ಮೊದಲು ರಾಷ್ಟ್ರಕೂಟರಾಜರ ವಂಶ, ವಂಶದ ಶಾಖೆ, ರಾಜಧಾನಿ, ಬಿರುದು, ಅಥವಾ ಕಾಲಕ್ರಮವಾದ ಗ್ರಾಣಾಭಿಧಾನ, ಇವುಗಳನ್ನು, ಪ್ರಾಚೀನಲೇಖ ಮಾಲೆ, ಮೈಸೂರಿನ ಶಾಸನಗಳು, ಶಬ್ದಮಣಿದರ್ಪಣ, ಕವಿರಾಜಮಾರ್ಗ ಮೊದಲಾದುವುಗಳ ಆಧಾರಗಳಿಂದ ಉದಾಹರಿಸಿ, ಈ ವಂಶದವರೆಲ್ಲರೂ ಸನಾತನ ಧರ್ಮಾವಲಂಬಿಗಳಾಗಿದ್ದ ಕಾರಣ, ಈ ನೃಪತುಂಗನೂ ಸನಾತನಧರ್ಮಾವಲಂಬಿಯೇ ಎಂದು ನಿರ್ಧರಿಸಿ, ನೃಪತುಂಗನು ಜೈನಮತಾವಲಂಬಿಯಾಗಿದ್ದನೆಂಬುದಕ್ಕೆ ತೋರುವ ಜಿನಸೇನಾ[illegible]ಕಾ, [illegible] ಮತ್ತು ಪಂಡಿತಾರಾಧ್ಯನ ಈ ಕಾವ್ಯದ ಟೀಕೆ, ಸಂಸ್ಕೃತದ [illegible] ವೀರ ಸೇನಾಚಾರ್ಯರ ಗಣಿತಸಾರಸಂಗ್ರಹ ಈ ನೃಪತುಂಗವಿರಚಿತವಾದ ಪ್ರಶ್ನೋತ್ತರ ರತ್ನಮಾಲಿಕಾ, ಎಂಬ ಪ್ರಮಾಣಗಳಲ್ಲಿ ಒಂದೊಂದಕ್ಕೆ ಒಂದೊಂದು ದೋಷವನ್ನು ಹೇಳಿ ನಿರಾಕರಿಸಿರುವರು. ಅಲ್ಲದೆ, ಈ ವಂಶದವರು ಕೊಟ್ಟಿರುವ ಜೈನಮತ ಪ್ರೋತ್ಸಾಹವನ್ನೂ "ಪ್ರಾಚೀನ ಭಾರತದಲ್ಲಿಯ ಸರ್ವಮತಸಮತಾವೃತ್ತಿ" ಎಂಬ ಮಾತಿನಿಂದ ಸಮಾಧಾನ ಗೊಳಿಸಿರುವರು. ಇವರು ಆ ಉಪನ್ಯಾಸದಲ್ಲಿ ನೃಪತುಂಗನ ಮತವನ್ನು ನಿರ್ಧರಿಸಲು ಮುಖ್ಯ ಸಾಧನವಾದ ಕವಿರಾಜಮಾರ್ಗ ಗ್ರಂಥ ಕರ್ತೃತ್ವದ ವಿಮರ್ಶೆಗೆ ಪ್ರಯತ್ನಿಸಲೇ ಇಲ್ಲ, ಆದರೂ ಸ್ವಕೃತ ಅಥವಾ ಸ್ವಾಸ್ಥಾನಪಂಡಿತ ಕೃತವಾದ ಈ ಕವಿರಾಜಮಾರ್ಗದಲ್ಲಿ ಗ್ರಂಥಕರ್ತೃವು ಎಲ್ಲಿಯೂ ವೈದಿಕಮತದವನೆಂದು ತೋರಿಬರದೆ (1) ಜೈನನೆಂದೇ ಹಲವೆಡೆಗಳಲ್ಲಿ ಸ್ಪಷ್ಟವಾಗಿರುವುದಕ್ಕೆ ಯಾವ ಸಮಾಧಾನವನ್ನೂ ಹೇಳಿಲ್ಲ.

ಕವಿರಾಜಮಾರ್ಗವನ್ನು ನೃಪತುಂಗನೇ ರಚಿಸಿರಲಿ, ಅಥವಾ ಅವನ ಆಸ್ಥಾನ ಪಂಡಿತನೇ ನೃಪತಂಗನ ಹೆಸರಿನಲ್ಲಿ ರಚಿಸಿರಲಿ, ನೃಪತುಂಗನು ಸನಾತನಧರ್ಮಾವಲಂಬಿಯಾಗಿಯೇ ಇದ್ದನೆಂಬುದಕ್ಕೆ ಇದು ಸಂಪೂರ್ಣ ವಿರೋಧವಾಗಿರುವುದು.

---

1. (a) ಕಾವ್ಯಾದರ್ಶದ ಲಕ್ಷ್ಯ ಲಕ್ಷಣಗಳೇ ಬಹುಮಟ್ಟಿಗೆ ಕವಿರಾಜಮಾರ್ಗದಲ್ಲಿ ಪರಿವರ್ತಿತವಾಗಿವೆ. ಆದರ್ಶದಲ್ಲಿಯ—ಹರಿಪಾದಃ ಶಿರೋಲಗ್ನಜಹ್ನುಕನ್ಯಾಜಟಾಂಶುಕಃ (2-81) ಎಂಬ ವಿಷ್ಣುಸ್ತುತಿರೂಪವಾದ ಲಕ್ಷ್ಯಪದ್ಯವನ್ನು—ಜಿನಚರಣನಖಾದರ್ಶಂ.........ಮಕ್ಕಳ್ಕಂ, (3-18) ಎಂದು ಕವಿರಾಜಮಾರ್ಗ ಕರ್ತೃವು ಜಿನಸ್ತುತಿರೂಪವಾಗಿ ಮಾರ್ಪಡಿಸಿರುವನು, (b) ಆಗಮ ಲಕ್ಷಣವನ್ನು ಹೇಳುವಾಗ "ರಾಗಾದಿ ದೋಷವಿರಹಿತ ...ದೋಷಂ" (1-103) ಎಂದು ಆಗಮಕ್ಕೆ ಜೈನಮತ ಲಕ್ಷಣವನ್ನೇ ಹೇಳಿರುವನು. (e) ಮನದೆ ನೆನೆವವರ ಕಿಡುಗುಂ ಜಿನಾಧಿಪಾ... (1-80) ಇನೇ ಮೊದಲಾದ ಜಿನಸ್ತುತಿರೂಪವಾದ ಪದ್ಯಗಳೇ ವಿಶೇಷವಾಗಿ ದೊರಕುವುವು. ವೈದಿಕಮತವಿಷಯಗಂಧವೇ ಇಲ್ಲ.

ವೈದಿಕಮತಾವಲಂಬಿಯಾದ ನೃಪತುಂಗನೇ ಈಗ್ರಂಥಕರ್ತೃವಾಗಿದ್ದಿರೆ ತನ್ನ ಗ್ರಂಥ ದೊಳಗೆ ಬಹು ಮುಖ್ಯಸಂದರ್ಭಗಳಲ್ಲಿ ವೈದಿಕಮತ ಪ್ರಕ್ರಿಯೆಯನ್ನು ಹೇಳುವುದಕ್ಕೆ ಬದಲಾಗಿ ಜೈನಮತ ಪ್ರಕ್ರಿಯೆಯನ್ನು ಹೇಳುತ್ತಿರಲಿಲ್ಲ ವೈದಿಕಮತಾನುಸಾರಿಯಾದ ಅರಿಕೇಸರಿಯನ್ನು ಉದ್ದೇಶಿಸಿ ಜೈನಮತದವನಾದ ಪಂಪನು ಬರೆದಿರುವ "ವಿಕ್ರ ಮಾರ್ಜುನವಿಜಯ"ದಲ್ಲಿ ಜೈನಮತಪ್ರಕ್ರಿಯೆಯ ಗಂಧಲೇಶವೂ ಇಲ್ಲ. ಹೀಗೆಯೇ ತೈಲಪನನ್ನುದ್ದೇಶಿಸಿ ಜೈನಮತಶಿಖಾಮಣಿಯಾದ ರನ್ನನು ಬರೆದ ಗದಾಯುದ್ಧದಲ್ಲೂ ಜೈನಮತಪ್ರಕ್ರಿಯಾವಾಸನೆಯೇ ಇಲ್ಲ. ಹೀಗಿರುವಾಗ ವೈದಿಕ ಮತಾನುವರ್ತಿ ಯಾದ ನೃಪತುಂಗನ ಆಸ್ಥಾನದಲ್ಲಿಯ ಜೈನ ಕವಿಯು ನೃಪತುಂಗನನ್ನುದ್ದೇಶಿಸಿ ಬರೆದ ಕಾವ್ಯದಲ್ಲಿ ಜೈನಮತಪ್ರಕ್ರಿಯೆಯ ಸಾರವನ್ನು ಹಲವೆಡೆಗಳಲ್ಲಿ ಪ್ರವೇಶಮಾಡಿಸಿರುವ ನೆಂಬುದನ್ನು "ಸರ್ವಮತಸಮತಾವೃತ್ತಿಯೆಂಬ" ಅಲ್ಪಕಾರಣದಿಂದ ದೂರೀಕರಿಸು ವುದು ಅಷ್ಟು ಉಚಿತವೆಂದು ಕಂಡುಬರುವುದಿಲ್ಲ.

ಈ ಲೇಖನದಲ್ಲಿ ಇವರು ಉದಾಹರಿಸಿರುವ ಶಾಸನವನ್ನು ಪರಿಶೀಲಿಸುವುದ ರಿಂದ ನಮಗೆ ತೋರುವ ಅಭಿಪ್ರಾಯವನ್ನು ಸಂಗ್ರಹವಾಗಿ ಇಲ್ಲಿ ತಿಳಿಸುತ್ತೇವೆ. ಈ ನೃಪತುಂಗನ ರಾಜ್ಯಭಾರದ 52 ನೆಯವರುಷದಲ್ಲಿ ಹುಟ್ಟಿದ ಈ ಶಾಸನದ ಆದಿಯಲ್ಲಿ, ಸನಾತನ ಧರ್ಮಾನುಗುಣವಾಗಿ ತ್ರಿಮೂರ್ತಿಗಳನ್ನು—ಅದರಲ್ಲಿಯೂ ವಿಷ್ಣುವಿಗೆ ಪ್ರಾಶಸ್ತ್ಯವನ್ನಿತ್ತು—ಸ್ತುತಿಸಿರುವ ಪದ್ಯವು ಇರುವುದು ಬಳಿಕ, ರಾಷ್ಟ್ರಕೂಟ ರಾಜರನ್ನು ಜಗತ್ತುಂಗನ (ನೃಪತುಂಗನ ತಂದೆ) ವರೆಗೂ ವರ್ಣಿಸಿ, ಆಮೇಲೆ ಕೀರ್ತಿ ನಾರಾಯಣನೆಂಬ ಬಿರುದುಳ್ಳ ಅತಿಶಯಧವಳನನ್ನು ವರ್ಣಿಸಿ, ಮುಂದೆ, "ಅಮೋ ಘವರ್ಷ ನೃಪತುಂಗ ನಾಮಾಂಕಿತನಾ ವಿಜಯರಾಜ್ಯಂ" ಎಂದು, ಈ ಅತಿಶಯ ಧವಳನನ್ನೇ ನೃಪತುಂಗನೆಂದು ಸ್ಪಷ್ಟಪಡಿಸಿ ಮತ್ತೆ "ಸ್ವಸ್ತಿ ಸಮಧಿಗತ ಪಂಚ ಮಹಾಶಬ್ದ..." ಎಂಬ ವಾಕ್ಯವು ಆರಂಭವಾಗಿದೆ. ಶಾಸನದ ಮಧ್ಯದಲ್ಲಿ ಮತ್ತೆ ಸ್ವಸ್ತಿಶಬ್ದವನ್ನು ಪ್ರಯೋಗಿಸಿರುವುದನ್ನು ನಾವು ಔದಾಸೀನ್ಯದಿಂದ ದೂರಮಾಡ ಕೂಡದು "ಸಮಧಿಗತ ಪಂಚಮಹಾಶಬ್ದ............ಭಟ್ಟಾರಕ" ಎಂಬುದು. ಜೈನಮತಾವಲಂಬಿಗಳಿಗೆ ಪ್ರಯೋಗಿಸುವ ವಿಶೇಷಣಗಳು. ಇದರಿಂದ ನೃಪತುಂಗನೂ ಈತನ ವಂಶದವರೂ ಸನಾತನ ಧರ್ಮಾವಲಂಬಿಗಳಾಗಿದ್ದರೂ, ಈ ಶಾಸನ ಕಾಲದಲ್ಲಿ ಮಾತ್ರ ಈತನು ಜೈನನಾಗಿದ್ದನೆಂದು ಊಹಿಸುವುದು ತಪ್ಪಾಗಲಾರದು. ತನ್ನ ಪೂರ್ವಿಕರೂ, ತನ್ನ ಪೂರ್ವವಯಸ್ಸಿನಲ್ಲಿ ತಾನೂ ಅವಲಂಬಿಸಿದ್ದ ಸನಾತನ ಧರ್ಮದ ಮಾನ್ಯತೆಯನ್ನು ಮಾತ್ರ ಈತನು ದೂರಮಾಡಲಿಲ್ಲವೆಂಬುದನ್ನು ಈಶಾಸನದ ಆದಿಭಾಗವೇ ತೋರಿಸುತ್ತದೆ. ಈ ಶಾಸನವೇ ಈತನು ಉಭಯಮತಗಳನ್ನೂ

ವಿಶೇಷವಾಗಿ ಗೌರವಿಸುತ್ತಿದ್ದನೆಂಬುದಕ್ಕೆ ಮುಖ್ಯಸಾಧನವಾಗಿರುತ್ತದೆ. ಇಂತಹ ಮತಾಂತರಾವಲಂಬಿಗಳಾದ ಕೆಲವರಲ್ಲಿಯೇ ಪ್ರಾಚೀನ ಭಾರತದಲ್ಲಿಯು ಧರ್ಮ ಸಮವೃತ್ತಿಯು ಇದ್ದಿತೇ ಹೊರತು, ಎಲ್ಲಕಾಲಗಳಲ್ಲಿಯೂ, ಎಲ್ಲಾ ರಾಜರುಗಳಲ್ಲಿಯೂ, ಈ ಗುಣವು ಇರಲಿಲ್ಲವೆಂದು ಇತರ ಹಲವು ಉದಾಹರಣೆಗಳಿಂದ ಸ್ಪಷ್ಟಪಡಿಸಬಹುದು. "ಕವಿರಾಜಮಾರ್ಗಗ್ರಂಥಕರ್ತನು ನೃಪತುಂಗನ ಆಸ್ಥಾನ ಕವಿಯಾದುದರಿಂದ, ಪಂಪ—ರನ್ನರಂತೆ ಈತನೂ ತನ್ನ ಆಶ್ರಯದಾತನನ್ನು ಮಂಗಳಪದ್ಯದಲ್ಲಿ ಶ್ಲೇಷೆಯಿಂದ ವಿಷ್ಣುವಿನೊಡನೆ ಹೋಲಿಸಿ ಸ್ತುತಿಸಿರುವನೆಂದೂ, ಹೇಳಬಹುದಾದುದರಿಂದ, ನೃಪತುಂಗನು ಸನಾತನಧರ್ಮಾವಲಂಬಿಯೆಂದು ಸ್ಪಷ್ಟವಾಗುವುದು" ಎಂಬ ಇವರ ನಿರ್ಧರವು ನಮಗೂ ಇಷ್ಟವಾದರೂ ಕೊನೆಯವರೆಗೂ ಸನಾತನ ಧರ್ಮಾವಲಂಬಿಯಾಗಿದ್ದನೆಂದುಮಾತ್ರ ನಾವು ಒಪ್ಪಲಾರೆವು. ಈ ಗ್ರಂಥಕರ್ತೃವು ಜೈನನು. ಆಶ್ರಯದಾತನು ಸನಾತನಧರ್ಮಾವಲಂಬಿಯು ಎಂದು ಮಾತ್ರ ಈ ಭಾಗದಿಂದ ತಿಳಿದುಬರುವುದು. ಆದುದರಿಂದ ಈ ಗ್ರಂಥವನ್ನು ಬರೆದ ಕಾಲದಲ್ಲಿ ನೃಪತುಂಗನು ವೈದಿಕಮತಾಚಾರವನ್ನು ಸಂಪೂರ್ಣವಾಗಿ ಬಿಡದಿದ್ದರೂ ಜೈನಮತಾಭಿನಿವೇಶವು ಆಗಲೇ ಅವನ ಹೃದಯದಲ್ಲಿ ಬೇರೂರಿತ್ತೆಂದು ನಿಸ್ಸಂದೇಹವಾಗಿ ಹೇಳಬಹುದು. ಒಟ್ಟಿನಮೇಲೆ ನೋಡುವಲ್ಲಿ, ನೃಪತುಂಗನು ಆದಿಯಲ್ಲಿ ವೈದಿಕ ಮತಾವಲಂಬಿಯಾಗಿದ್ದು, ಅನೂಚಾನವಾಗಿದ್ದ ವೈದಿಕಮತದ ಆಚಾರವನ್ನು ಬಿಡದೆ ಜಿನಮತವನ್ನು ಸ್ವೀಕರಿಸಿ, ಕೊನೆಗೆ ಜಿನದೀಕ್ಷೆಯನ್ನು ಸ್ವೀಕರಿಸಿದನೆಂದು ಒಪ್ಪಿಕೊಳ್ಳುವುದರಿಂದ ಈಗ ಉಪಲಬ್ಧವಾಗಿರುವ ಆವಸಾಧನಗಳಿಗೂ ಪರಸ್ಪರವಿರೋಧವು ಇರುವುದಿಲ್ಲ.

ಈ ಮೇಲೆ ಹೇಳಿದ ಊಹೆಗಳಿಗೆ ಪೊನ್ನನು ಶಾಂತಿಪುರಾಣದ ಅಂತ್ಯದಲ್ಲಿ ಕುಕವಿನಿಂದಾ ಪ್ರಸಂಗದಲ್ಲಿ ಹೇಳಿರುವ :—

"ಎಸೆಯದೆ ಪೂೞ್ದು ಕೆಟ್ಟ ಪೞಿಗಬ್ಬಮನಾವಗಮೆಮ್ಮವೆಂದು ಬಾ ।
ಜಿಸಿ ಪೆಱರ್ಗಿತ್ತುದಲ್ಲದೆ ಬಹುಶ್ರುತಮೆಂಬಿನ ವೆಕ್ಕಲಾವಣಂ ॥
ಪೊಸಯಿಪ ಕಮ್ಮಯಿಪ್ಪ ಸಮಕಟ್ಟುವ ಬಿನ್ನಣ ಮಿಲ್ಲದರ್ಕೆ ರಂ ।
ಜಿಸವೆರ್ದೆಗೊಳ್ಳವೀಗಡಿನ ಕಬ್ಬಿಗವಂದಿಗಳೊಂದವಿಂದಿಗಳ್ ॥ XIV-76"

ಈ ಪದ್ಯವೊಂದು, ವಿಶೇಷ ಸಹಾಯಕವಾಗಿರುವುದು. ಈ ಪೊನ್ನನು ಕವಿರಾಜಮಾರ್ಗ ಗ್ರಂಥಕರ್ತೃವಿಗಿಂತಲೂ ಸು. 50-60 ವರುಷಗಳಷ್ಟು ಈಚಿನವನು ಇಷ್ಟು ಸಮೀಪಕಾಲದಲ್ಲಿದ್ದ ಇವನಿಗೆ ಕವಿರಾಜಮಾರ್ಗ ಕರ್ತೃವಿನ ವಿಷಯದಲ್ಲಿನ ಪ್ರವಾದವೆಲ್ಲವೂ ಚೆನ್ನಾಗಿ ತಿಳಿದಿರಬೇಕು. ಆದುದರಿಂದಲೇ ಈ ಪದ್ಯದಲ್ಲಿ

ಅನ್ಯೋಕ್ತಿಯಿಂದ ಕವಿರಾಜಮಾರ್ಗ ಕರ್ತೃವನ್ನೇ ಇವನು ನಿಂದಿಸಿರಬೇಕು. (ಇನ್ನಾವ ಕವಿಗಳೂ ಈ ಬಗೆಯಲ್ಲಿ ಅನ್ಯಕವಿಗಳನ್ನು ನಿಂದಿಸಿಲ್ಲ.)

## ಕವಿರಾಜಮಾರ್ಗಗ್ರಂಥ.

ಇಷ್ಟರ ತನಕ ಈಗ್ರಂಥದ ಕರ್ತೃತ್ವ, ಗ್ರಂಥಕರ್ತೃವಿನ ಮತ ಈವಿಷಯಗಳಲ್ಲಿ ವಿಮರ್ಶಕರ ಅಭಿಪ್ರಾಯಗಳೆಲ್ಲವನ್ನೂ ಕ್ರೋಡೀಕರಿಸಿ,ಅಲ್ಲಲ್ಲಿ ನಮಗೆ ತೋರಿದ ಅಭಿಪ್ರಾಯಗಳನ್ನು ಸೂಚಿಸಿದುದಾಯಿತು. ಇನ್ನು "ಕವಿರಾಜಮಾರ್ಗ" ಗ್ರಂಥದ ಸ್ವರೂಪವನ್ನು ಸ್ಥೂಲಮಾನದಿಂದ ಇಲ್ಲಿ ನಿರೂಪಿಸಿ ಪ್ರಕೃತ ವಿಷಯವನ್ನು ಉಪಸಂಸರಿಸುವೆವು.

### 1-ನೆಯ ಪರಿಚ್ಛೇದ.

ಈ ಅಲಂಕಾರಗ್ರಂಥವು ಮೂರು ಪರಿಚ್ಛೇದಗಳಾಗಿ ವಿಭಾಗಿಸಲ್ಪಟ್ಟಿದೆ. (ಆದರೆ ಇದಕ್ಕೆ ಮಾತೃಕೆಯಾದ ದಂಡಿಯಕಾವ್ಯಾದರ್ಶದಲ್ಲಿ ನಾಲ್ಕುಪರಿಚ್ಛೇದಗಳಿವೆ.) ಕವಿಯು ಮೊದಲನೆಯ ಪರಿಚ್ಛೇದದ ವಿಷ್ಣುಸ್ತುತಿ ರೂಪವಾದ ಎರಡು ಮಂಗಳಪದ್ಯಗಳಲ್ಲಿ ಶ್ಲೇಷೆಯಿಂದ, ತನ್ನ ಆಶ್ರಯದಾತನಾದ ನೃಪತುಂಗನನ್ನು ಸ್ತುತಿಸಿ ಬಳಿಕ ಸರಸ್ವತಿಯನ್ನೂ, ಪೂರ್ವಾಚಾರ್ಯರನ್ನೂ, ನೃಪತುಂಗಸಭಾಸದರನ್ನೂ ಪ್ರಾರ್ಥಿಸಿ,ಭಾಷೆಯ ಮತ್ತು ಭಾಷಾಶಾಸ್ತ್ರದ ಆವಶ್ಯಕತೆಯನ್ನು ನಿದರ್ಶನಪೂರ್ವಕವಾಗಿ ಉಪಪಾದಿಸಿ, ಕಾವ್ಯಹೇತುವನ್ನು ನಿರೂಪಿಸಿ, ಅಶಕ್ತನು ಕವಿತ್ವಮಾಡಲು ಯತ್ನಿಸಕೂಡದೆಂದು ನಿರಾಕರಿಸಿ,ಪರಚ್ಛಾಯಾನುವರ್ತಿಗಳಾಗದೆ ಸ್ವಪ್ರತಿಭಾಶಕ್ತಿಯಿಂದಲೇ ಕಾವ್ಯವನ್ನು ರಚಿಸುವ ಕವಿಶ್ರೇಷ್ಠರನ್ನೂ, ವಿಶೇಷವಾಗಿ ಪದ್ಯಗ್ರಂಥಕರ್ತೃಗಳಾದ ಕವಿಮಣಿಗಳನ್ನೂ ಶ್ಲಾಘಿಸಿ, (ಈ ಗ್ರಂಥಕ್ಕೆ ಮೂಲವಾದ ಕಾವ್ಯಾದರ್ಶದಲ್ಲಿ ಈ ವಿಷಯವಿಲ್ಲದಿರುವುದೂ, ಈ ಗ್ರಂಥದಲ್ಲಿ ಪದ್ಯಗ್ರಂಥಕರ್ತೃಗಳ ಗೋಷ್ಠಿಯಲ್ಲಿ ಕವೀಶ್ವರನೆಂಬುವನನ್ನು ಸೇರಿಸಿ ಹೇಳಿರುವುದೂ, ಈಕವಿಯು ಪದ್ಯಕಾವ್ಯಗಳನ್ನು ಬರೆದಿರಬಹುದೆಂಬ ಊಹೆಗೆ ಉಪಷ್ಟಂಭಕ ವಾಗಿರುವುವು.) ಉತ್ತಮಕವಿಕೃತಕಾವ್ಯಪ್ರಯೋಜನವನ್ನುಹೇಳಿ, ಕಾವ್ಯವನ್ನು ಅವಶ್ಯವಾಗಿ ರಚಿಸಲೇಬೇಕೆಂದು ಉಪದೇಶಿಸಿ, ಪ್ರಕೃತಗ್ರಂಥವನ್ನು ಆರಂಭಿಸುವನು.

ಕಾವ್ಯಲಕ್ಷಣವನ್ನೂ ಪದ್ಯಗದ್ಯಾತ್ಮಕಕಾವ್ಯಭೇದಗಳನ್ನೂ ಹೇಳಿದ ತರುವಾಯ, ಗದ್ಯಲಕ್ಷಣ, ಸಂಸ್ಕೃತ ಗದ್ಯ ಗ್ರಂಥಗಳು, ಕರ್ಣಾಟಕ ಗದ್ಯಗ್ರಂಥಗಳು, ಪದ್ಯಲಕ್ಷಣ, ಸಂಸ್ಕೃತಪದ್ಯ ಗ್ರಂಥಕರ್ತೃಗಳು, ಕನ್ನಡಕಾವ್ಯಭೇದ,

ಈ ಕನ್ನಡಕಾವ್ಯಗಳ ಲಕ್ಷಣ, ಕನ್ನಡನಾಡಿನ ಮೇರೆಗಳು, ತಿರುಳ್ಗನ್ನಡದ
ತವರ್ಮನೆ, ಕನ್ನಡನಾಡಿನವರ ಪಾಂಡಿತ್ಯ. ಇವುಗಳನ್ನು ವಿವರಿಸಿ, ಕನ್ನಡಭಾಷೆಯ
ಮಹತ್ವವನ್ನೂ ನಿರೂಪಿಸಿ, ಕಾವ್ಯದಲ್ಲಿ ಅಲ್ಪದೋಷವೂ ಇರಕೂಡದೆಂದು ನಿದ
ರ್ಶನ ಪೂರ್ವಕವಾಗಿ ಉಪಪಾದಿಸಿ, ತಾತ್ಕಾಲಿಕವಾದ ಹಳಗನ್ನಡ ಹೊಸಗನ್ನಡ
ಭಾಷೆಗಳ ಸ್ವರೂಪವನ್ನೂ, ಕನ್ನಡಭಾಷೆಯಲ್ಲಿ ಸಂಸ್ಕೃತಪದಗಳನ್ನು ಉಪಯೋ
ಗಿಸುವ ನಿಯಮವನ್ನೂ ತಿಳಿಸಿ, ಭಾಮಹ ಮತ್ತು ದಂಡಿ, ಇವರಿಬ್ಬರ ಮತವನ್ನೂ
ಒಟ್ಟಿಗೆ ಸೇರಿಸಿ, ಕಾವ್ಯದೋಷಗಳನ್ನು ಲಕ್ಷ್ಯಲಕ್ಷಣದೊಡನೆ ವಿವರಿಸಿ, ಬಳಿಕ ಕಾವ್ಯ
ದಲ್ಲಿ ದೋಷವಿರಕೂಡದೆಂದು ಹೇಳಿ, ಮತ್ತೆ (ಈ ಪುನರುಕ್ತಿಯಿಂದಲೇ ಇಲ್ಲಿಂದ
ಮುಂದೆ ಹೇಳುವ ವಿಷಯವೆಲ್ಲವೂ ಶ್ರೀವಿಜಯಕೃತಕವಿಮಾರ್ಗದಲ್ಲಿಲ್ಲದೆ, ಈ ಕವಿ
ರಾಜ ಮಾರ್ಗಕರ್ತೃವಿನಿಂದಲೇ ಬರೆಯಲ್ಪಟ್ಟುವೆಂದು ಊಹಿಸಲು ಅವಕಾಶವಿರು
ವುದು.) ಕೆಲವು ಕಾರಕದೋಷಾದಿಕಾವ್ಯದೋಷಗಳನ್ನು ಹೇಳಿ ಈ ಪ್ರಥಮಪರಿ
ಚ್ಛೇದವನ್ನು ಮುಗಿಸಿರುವನು. ದಂಡಿಯಾದರೋ ಈ ದೋಷ ಪ್ರಕರಣವನ್ನು
ನಾಲ್ಕನೆಯ ಪರಿಚ್ಛೇದದಲ್ಲಿ ಹೇಳಿರುವನು. ಕಾರಕ ದೋಷಾದಿಗಳನ್ನು ಹೇಳಲೇಇಲ್ಲ.

### 2-ನೆಯ ಪರಿಚ್ಛೇದ.

ಇನ್ನು ಎರಡನೆಯ ಪರಿಚ್ಛೇದದಲ್ಲಿ ಶಬ್ದಾರ್ಥಾಲಂಕಾರಗಳೆಂಬ ಅಲಂಕಾರ
ಭೇದಗಳನ್ನು ಹೇಳಲು ಹೊರಟು ಅವುಗಳೊಳಗೆ ಪ್ರಧಾನವಾದ ಶಬ್ದಾಲಂಕಾರ
ಸ್ವರೂಪವನ್ನು ಮೊದಲು ನಿರೂಪಿಸುವುದಾಗಿ ಪ್ರತಿಜ್ಞೆಮಾಡಿ, ಕನ್ನಡಭಾಷೆಯಲ್ಲಿ
ಸಂಭವಿಸಬಹುದಾದ ಪದಸಂಯೋಗಾರ್ಥಸಂಯೋಗ ಜನ್ಯದೋಷಗಳನ್ನೂ, ಸಂಧಿ
ದೋಷವನ್ನೂ (ಇದು ಶಬ್ದಮಣಿ ದರ್ಪಣದಲ್ಲಿಯೂ ಉಕ್ತವಾಗಿದೆ) ಷಷ್ಠಿಯ ಮತ್ತು
ಸಂಬೋಧನೆಯ ದೀರ್ಘಪ್ರಯೋಗದ ದೋಷವನ್ನೂ, ಪ್ರಾಸಲಕ್ಷಣವನ್ನೂ,
ಪ್ರಾಸಭೇದಗಳನ್ನೂ, ಲಕ್ಷ್ಯಲಕ್ಷಣಗಳೊಡನೆ ವಿವರಿಸಿ, ಅನಂತ ವಿಕಲ್ಪವುಳ್ಳ
ಮಾರ್ಗಗತಿಗಳನ್ನು, ಪುರಾಣ ಶಾಸ್ತ್ರವನ್ನು ಅನುಸರಿಸಿ ಕನ್ನಡದಲ್ಲಿ "ಇನಿಸಂ
ಪೇೞ್ವೆನೆಂದು ಪ್ರತಿಜ್ಞೆಮಾಡಿ, (ಇದರಿಂದಲೂ ಪೂರ್ವಶಾಸ್ತ್ರವೆಂದರೆ ದಂಡಿಯ
ಮಾರ್ಗಲಕ್ಷಣವನ್ನು ಅನುಸರಿಸಿದ್ದ "ಕವಿಮಾರ್ಗವನ್ನು" ನೋಡಿ ಕನ್ನಡಕ್ಕೆ ಸಂ
ಬಂಧಿಸಿದ ಕೆಲವು ಲಕ್ಷಣವನ್ನು, ಇಲ್ಲಿ ತಾನು ಹೆಚ್ಚಾಗಿ ಸೇರಿಸಿರುವನೆಂಬ ಧ್ವನಿಯು
ಸೂಚಿತವಾಗುವುದು) ದಕ್ಷಿಣೋತ್ತರಮಾರ್ಗಭೇದಕ್ಕೆ ನಿದಾನವಾದ ಶ್ಲೇಷ ಪ್ರಸಾ
ದಾದಿ ಹತ್ತು ಕಾವ್ಯಗುಣಗಳನ್ನು ಲಕ್ಷ್ಯಲಕ್ಷಣಗಳೊಡನೆ ವಿವರಿಸಿ, ಈಮಾರ್ಗ
ಲಕ್ಷಣಕ್ಕೆ ಸಂಬಂಧಿಸಿದ ಕನ್ನಡ ಭಾಷೆಯಲ್ಲಿಯ ಕೆಲವು ಪದಗಳ ಸ್ವರೂಪವನ್ನೂ
ಹೇಳಿ, ಕನ್ನಡಭಾಷೆಯಲ್ಲಿ ರಚಿಸಲ ಶಕ್ಯವಾದ, ಚಿತ್ರಕಾವ್ಯಗಳ ಜಾತಿಗೆ ಸೇರಿದ,

ಏಕಾಕ್ಷರಿ, ದ್ವ್ಯಕ್ಷರಿ, ಯಮಕ ವೊದಲಾದ ಶಬ್ದಚಿತ್ರವುಳ್ಳ ಪದ್ಯಗಳನ್ನೂ; ಪ್ರಹೇಳಿಕೆಗಳನ್ನೂ, ಉದಾಹರಿಸಿ, ಈ ಎರಡನೆಯ ಪರಿಚ್ಛೇದವನ್ನು ಮುಗಿಸಿರುವನು.

ದಂಡಿಯು ತನ್ನ ಕಾವ್ಯಾದರ್ಶದಲ್ಲಿ ಪ್ರಥಮಪರಿಚ್ಛೇದದಲ್ಲಿಯೇ ಕಾವ್ಯಾಂಗವೆನಿಸಿದ ಶಬ್ದರಚನಾಸಂಘಟನಾತ್ಮಕವಾದ ಈ ಮಾರ್ಗದ್ವಯಲಕ್ಷಣಗಳನ್ನು ನಿರೂಪಿಸಿ, ಏಕಾಕ್ಷರಿ, ಯಮಕ, ಪ್ರಹೇಳಿಕೆ, ವೊದಲಾದ ಚಿತ್ರಕಾವ್ಯ ವಿಚಾರವನ್ನು ಮೂರನೆಯ ಪರಿಚ್ಛೇದದಲ್ಲಿ ಹೇಳಿರುವನು.

## 3-ನೆಯ ಪರಿಚ್ಛೇದ.

ಈ ಪರಿಚ್ಛೇದದಲ್ಲಿ ದಂಡಿಯು ಹೇಳಿರುವಂತೆಯೇ ಈ ಗ್ರಂಥಕರ್ತೃವೂ, ಮೂವತ್ತೈದುಬಗೆಯ ಅರ್ಥಾಲಂಕಾರಗಳನ್ನೂ, ಅವುಗಳ ಆಂತರಾಳಿಕಭೇದಗಳನ್ನೂ, (ಕೆಲವು ಆಂತರಾಳಿಕ ಭೇದಗಳನ್ನು ಬಿಟ್ಟಿರುವನು. ಒಂದೆರಡು ಭೇದಗಳನ್ನು ಹೆಚ್ಚಾಗಿ ಸೇರಿಸಿರುವನು.) ಲಕ್ಷ್ಯಲಕ್ಷಣಗಳೊಡನೆ ವಿವರಿಸಿ, ಕೊನೆಯಲ್ಲಿ ಧ್ವನಿಯೆಂಬ ಅಲಂಕಾರವೊಂದನ್ನೂ ಸೇರಿಸಿರುವನು. (III. 208) ಬಳಿಕ, ದಂಡಿಯು ಕಾವ್ಯಾದರ್ಶದ ಪ್ರಥಮಾಧ್ಯಾಯದ ಕೊನೆಯಲ್ಲಿ ಹೇಳಿರುವ ಅಷ್ಟಾದಶವರ್ಣನೆಯನ್ನು ಒಳಕೊಂಡಿರಬೇಕೆಂಬ ಮಹಾಕಾವ್ಯಲಕ್ಷಣವನ್ನು (III. 210—216) ಆರುವೃತ್ತಗಳಿಂದ ಅತಿಯಾಗಿ ವಿವರಿಸಿ ಹೇಳಿ, (ಈಲಕ್ಷಣವು ಪ್ರಾಯಃ ಕವಿಮಾರ್ಗದಲ್ಲಿ ದಂಡಿಯ ಲಕ್ಷಣದಂತೆಯೇ ಸಂಗ್ರಹವಾಗಿದ್ದಿರಬಹುದು.) ಈಕಾವ್ಯ ಪ್ರಯೋಜನವನ್ನು ಪ್ರಶಂಸಿಸಿ, ದ್ವಿಪ್ರಾಸ ವೊದಲಾದ ನಾಲ್ಕು ಬಗೆಯ ಪ್ರಾಸಗಳನ್ನು ಲಕ್ಷ್ಯಲಕ್ಷಣದೊಡನೆ ವಿವರಿಸಿ, (1)(ಇದು ಪ್ರಾಯಃ ಹಿಂದೆ ಎರಡನೆಯ ಪರಿಚ್ಛೇದದ ಪ್ರಾಸಪ್ರಕರಣದಲ್ಲಿಯೇ ಇರಬೇಕಾದುದು.) ಪ್ರಶಸ್ತಿವಾಕ್ಯದೊಡನೆ ಗ್ರಂಥವನ್ನು ಪರಿಸಮಾಪ್ತಿಮಾಡಿರುವನು. ಪ್ರತಿಯೊಂದು ಪರಿಚ್ಛೇದದ ಕೊನೆಯಲ್ಲಿಯೂ "ನೃಪತುಂಗದೇವಾನುಮತಕವಿರಾಜಮಾರ್ಗದೊಳ್" ಎಂದು ಹೇಳಿದ್ದರೂ, ಈ ಮೂರನೆಯ ಪರಿಚ್ಛೇದದ ಕೊನೆಯಲ್ಲಿ ಮಾತ್ರ "ಪರಮಸರಸ್ವತೀತೀರ್ಥಾವತಾರನೃಪತುಂಗದೇವಾನುಮತ" ಎಂದು ವಿಶೇಷಣವೊಂದನ್ನು ಹೆಚ್ಚಾಗಿ ಸೇರಿಸಿ ಹೇಳಿರುವನು.

ಈ ಗ್ರಂಥದಲ್ಲಿಯ ಲಕ್ಷ್ಯ ಪದ್ಯಗಳಲ್ಲಿ ಕೆಲವು ದಂಡಿಯ ಲಕ್ಷ್ಯಪದ್ಯಗಳ ಪರಿವರ್ತನಗಳಾಗಿವೆ. ಮತ್ತೆ ಕೆಲವು ಛಾಯಾಮಾತ್ರಾನುವರ್ತಿಗಳಾಗಿವೆ. ಮತ್ತೆ

(1) ಈ ಪ್ರಾಸವಿಚಾರವು II ನೆಯ ಪರಿಚ್ಛೇದದ 43 ನೆಯ ಪದ್ಯದ ಮುಂದೆ ಬರಬೇಕು. ಈ ಪದ್ಯಗಳಲ್ಲಿ "ಒಂದೊಂದರ . . ."—III. 233. ಎಂಬ ಪದ್ಯವು ನೇಮಿಚಂದ್ರನ ಲೀಲಾವತಿಯಲ್ಲಿ ರುವುದರಿಂದ, ಪ್ರಾಯಃ ಈ ಪ್ರಾಸಕ್ಕೆಕೊಟ್ಟಿರುವ ಲಕ್ಷ್ಯಪದ್ಯಗಳನ್ನು ಆಧುನಿಕರು ಯಾರೋ ಹೊಸದಾಗಿ ಸೇರಿಸಿರಬಹುದೆಂಬ ಊಹೆಗೆ ಅವಕಾಶವುಂಟು.

ಕೆಲವು ವೈದಿಕಮತಾನುಸಾರಿಯಾದ ಅರ್ಥವನ್ನು ಕೊಡುವುವಾದರೂ, ಅವು ದಂಡಿಯಪದ್ಯಗಳ ಛಾಯೆಗಳೇ ಹೊರತು ಬೇರೆಯಲ್ಲ. ಕೆಲವು ಜೈನಮತಪ್ರಕ್ರಿಯನ್ನು ಪ್ರತಿಪಾದಿಸುವಂತೆ ಈ ಗ್ರಂಥಕರ್ತೃವಿನಿಂದಲೇ ಮಾರ್ಪಡಿಸಲ್ಪಟ್ಟಿವೆ. (ಇವುಗಳನ್ನು ಕವಿಮಾರ್ಗದ ಪದ್ಯಗಳೆಂದಾದರೂ ಹೇಳಬಹುದು.) ರಾಮಾಯಣದ ಕಥಾಭಾಗವನ್ನೊಳಕೊಂಡಿರುವ ಕೆಲವು ಲಕ್ಷ್ಯಪದ್ಯಗಳು ಒಂದೆರಡೆಡೆಗಳಲ್ಲಿ ಕಂಡುಬರುವುವು. (II 36; 38; 40. III. 189, 194) ಇದರಿಂದ ಈ ಕಾವ್ಯಕ್ಕಿಂತಲೂ ಹಿಂದೆ ರಾಮಾಯಣಗ್ರಂಥವೊಂದಿತ್ತೆಂತಲೂ, ಆದರಿಂದ ಈ ಪದ್ಯಗಳು ಉದ್ಧೃತವಾದುವುಗಳೆಂದೂ ಕೆಲವರು ಊಹಿಸುವರು. ಆದರೆ ಈ ಗ್ರಂಥಕರ್ತನು ಆವುದೊಂದು ಲಕ್ಷ್ಯಪದ್ಯವನ್ನೂ ಪೂರ್ವಗ್ರಂಥಗಳಿಂದ ಉದ್ಧರಿಸಿದಂತೆ ಕಂಡುಬರುವುದಿಲ್ಲ. (1) ಏಕೆಂದರೆ ಇದರಲ್ಲಿರುವ ಲಕ್ಷ್ಯ ಪದ್ಯಗಳಲ್ಲಿ ದಂಡಿಯ ಅನುವಾದರೂಪನಾದ ಪದ್ಯಗಳನ್ನೂ, ರಾಮಾಯಣದ ಕಥಾಭಾಗವನ್ನು ಸೂಚಿಸುವ ಮೇಲೆಹೇಳಿದ ಪದ್ಯಗಳನ್ನೂ ಮತ್ತು ಎರಡನೆಯ ಪರಿಚ್ಛೇದದ 34 ನೆಯ ಈ ಪದ್ಯವನ್ನೂ ಬಿಟ್ಟರೆ, ಉಳಿದುವುಗಳಲ್ಲಿ ಹಲವು ಒಬ್ಬ ಅರಸನನ್ನು ಕುರಿತು ಸಂಬೋಧಿಸಿ, ಅವನ ಶೌರ್ಯೌದಾರ್ಯಾದಿ ಗುಣಗಳನ್ನು ವರ್ಣಿಸಿದಂತಿವೆ. ಇವನ್ನು ಗ್ರಂಥಕರ್ತನೇ ತನ್ನ ಆಶ್ರಯದಾತನನ್ನು ಕುರಿತು ಹೇಳಿದಂತೆ ನಾವು ಊಹಿಸಬಹುದು. ಮತ್ತೆ ಕೆಲವು ಒಬ್ಬ ಸ್ತ್ರೀಯನ್ನು ಕುರಿತು ಆಕೆಯ ಸೌಂದರ್ಯಾದಿಗಳನ್ನು ವರ್ಣಿಸಿದಂತಿರುವುದರಿಂದ ಇವನ್ನು ಕವಿಯು, ತನ್ನ ಆಶ್ರಯ ದಾತನು ಶೃಂಗಾರರಸ ಪ್ರಿಯನು ಎಂದು ತೋರಿಸುವುದಕ್ಕಾಗಿ, ಆತನು ಹೇಳಿದಂತೆ ತಾನೇ ರಚಿಸಿ ಹೇಳಿರುವನೆಂದೂ ಊಹಿಸಬಹುದು. ದಂಡಿಯುಕೂಡ ತನ್ನ ಲಕ್ಷ್ಯಪದ್ಯಗಳನ್ನು ಸ್ವಂತವಾಗಿಯೇ ವಿರಚಿಸಿರುವನಲ್ಲದೆ ಬೇರೆ ಗ್ರಂಥಗಳಿಂದ ಆರಿಸಿಕೊಂಡಿರುವುದಿಲ್ಲ. ಆದರೆ ಈ ಗ್ರಂಥದ ಪ್ರಾಸಪ್ರಕರಣದಲ್ಲಿ, "ಒಬ್ಬ ಸ್ತ್ರೀಯು ಹಡಗಿನಲ್ಲಿ ಪ್ರಯಾಣಮಾಡುತ್ತ, ಹಡಗು ಒಡೆದು ಹೋಗಲು, "ಪ್ರಮಾದಫಲಕದ" (Life saving appliance) ಆಧಾರದಿಂದ ಬದುಕಿದಳು. ಹೀಗೆ ಬದುಕುವುದು ದುರ್ಲಭ" ಎಂಬ ಅರ್ಥವನ್ನು ಕೊಡುವ—"ಪತ್ತಿ ಪ್ರಮಾದ ಫಲಕವ..." (II, 3[illegible].) ಎಂಬ ಪದ್ಯವು ರತ್ನಾವಳೀ ನಾಟಿಕೆಗೆ ಸಂಬಂಧಪಟ್ಟಂತೆ ಕಂಡುಬರುವುದು. ಸಂಸ್ಕೃತ ರತ್ನಾವಳೀ ನಾಟಿಕೆಯು ಕನ್ನಡಕ್ಕೆ ಪರಿವರ್ತಿತವಾಗಿದ್ದು ಆದರಿಂದ ಈ ಪದ್ಯವು ಉದ್ಧೃತವಾದುದು ಎಂದು ಹೇಳುವುದಕ್ಕೆ

(1) ಪ್ರಾಸಕ್ಕೂ, ರಸಾದ್ಯಲಂಕಾರಗಳಿಗೂ ಕೊಟ್ಟಿರುವ ಲಕ್ಷ್ಯಗಳಲ್ಲಿ ಮಾತ್ರವೇ ಈ ಬಗೆಯ ಅನ್ಯಗ್ರಂಥಪದ್ಯಗಳು ಕಂಡು ಬರುವುವು. ಈ ಪ್ರಾಸಲಕ್ಷ್ಯಗಳನ್ನು ಮಾತ್ರ ಆಧುನಿಕರು ಬೇರೆ ಗ್ರಂಥದಿಂದ ಆರಿಸಿ ಸೇರಿಸಿರಬಹುದೆಂಬ ಊಹೆಗೂ ಅವಕಾಶವುಂಟು.

ಸಾಕಾದಷ್ಟು ದೃಢವಾದ ಕಾರಣವಿಲ್ಲದುದರಿಂದ, ಸಂಸ್ಕೃತಭಾಷೆಯಲ್ಲಿಯೂ ವಿಶೇಷ ಪಾಂಡಿತ್ಯವುಳ್ಳ ಈಕವಿಯು ಸಂದರ್ಭಾನುಸಾರವಾಗಿ,ಆ ಪದ್ಯವೊಂದನ್ನು ಪರಿವರ್ತನೆ ಮಾಡಿ, ಸೇರಿಸಿರುವನೆಂದು ಊಹಿಸುವುದೇ ಪ್ರಕೃತಕ್ಕೆ ಯುಕ್ತವಾಗಿ ತೋರುವುದು.

ಈತನು ಸಂಸ್ಕೃತಾಲಂಕಾರಿಕರಾದ ಭಾಮಹಾದಿಗಳಿಗೆ ಎಷ್ಟರಮಟ್ಟಿಗೆ ಋಣಿಯಾಗಿರುವ ನೆಂಬುದನ್ನು ಇಲ್ಲಿ "ಸ್ಥಾಲೀಪುಲಾಕನ್ಯಾಯ"ದಿಂದ ತೋರಿಸಿ, ಈ ಬರವಣಿಗೆಯನ್ನು ಉಪಸಂಹರಿಸುವೆವು.

| ಭಾಮಹ. | ಕವಿರಾಜಮಾರ್ಗ. |
|---|---|
| 1. "ಗುರೂಪದೇಶಾದಧ್ಯೇತುಂ ಶಾಸ್ತ್ರಂ ಜಡಧಿಯೋಽಪ್ಯಲಂ" I. 5. | "ಜಡಜನಮುಂ...ಕ್ರಮಿಪಂ I. 10. |
| 2. "ಗದ್ಯಂ ಪದ್ಯಮಿತಿ ದ್ವಿಧಾ" | "ಕ್ರಮದೆ ಗದ್ಯಪದ್ಯಾಖ್ಯಾತಂ I. 24. (ಈಬಗೆಯ ವಿಭಾಗವು ದಂಡಿಯ ಕಾವ್ಯಾದರ್ಶದಲ್ಲಿಲ್ಲ.) |
| 3. "ಶ್ರುತಿದುಷ್ಟಾರ್ಥದುಷ್ಟೇಚ ಕಲ್ಪನಾ ದುಷ್ಟಮಿತ್ಯಪಿ, ಶ್ರುತಿಕಷ್ಟಂ ತಥೈವಾಹುಃ ವಾಚಾಂ ದೋಷಂ ಚತುರ್ವಿಧಂ". I 47. | ಶ್ರುತದುಷ್ಟಂ......... ..." I. 61. (ಈ ದೋಷವಿಭಾಗವು ಕಾವ್ಯಾದರ್ಶದಲ್ಲಿಲ್ಲ.) |

| ದಂಡಿ, (ಕಾವ್ಯಾದರ್ಶ.) | ಕವಿರಾಜಮಾರ್ಗ. |
|---|---|
| 1. "ಅಪಾರ್ಥಂ...ವಿಸಂಧಿಕಂ" IV. 2. | 3. "ಯತಿಭಂಗ..." I. 68. |
| 2. ದೇಶಕಾಲ...ಸೂರಿಭಿಃ" IV. 3. | 5. "ಆಗಮಸಮಯ..." I. 69. |
| 3. ಸಮುದಾಯಾರ್ಥಶೂನ್ಯಂ ಯತ್ತದಪಾರ್ಥಕಮಿಷ್ಯತೆ" IV. 5. | "ಸಮುದಾಯಾರ್ಥಮನಾರಯ I. 77. |
| 4. "ನೈತನ್ಮುಖಮಿದಂ...ಷಸ್ತವ" II. 94. | "ವದನಮಿದಲ್ತಂಬುರುಹಂ" III. 24. |
| 5. "ಪವನೋ ದಕ್ಷಿಣಃಪರ್ಣಂ...... ಪೀರುಧಾಂ॥" II. 98. | "ಮಲಯಾನಿಲನೊಯ್ಯನೆ..." III. 54. |

ಇನ್ನು ಈ ಗ್ರಂಥದ ಪ್ರಾಮಾಣಿಕತ್ವವನ್ನು ಕುರಿತು ಇಲ್ಲಿ ಒಂದೆರಡು ಮಾತುಗಳನ್ನು ಹೇಳುವುದು ಅಗತ್ಯವು. ಉಭಯಕವಿಚಕ್ರವರ್ತಿಯೆನಿಸಿದ

ಪೊನ್ನನು ತನ್ನ ಶಾಂತಿಪುರಾಣದಲ್ಲಿ ಈ ಗ್ರಂಥದ ಶಬ್ದಾರ್ಥಗಳ ಅನುರೂಪ್ಯ ವನ್ನು ನಿದರ್ಶನಗಳೊಡನೆ ವಿವರಿಸಿರುವ ಎರಡು ಪದ್ಯಗಳ (II, 4, 5) ಭಾವವನ್ನು ಸಂಪೂರ್ಣವಾಗಿ ಅನುವದಿಸಿ ಹೇಳಿರುವುದನ್ನು ನೋಡಿದರೆ, ಈ ಗ್ರಂಥಕರ್ತೃವು ಕರ್ಣಾಟಕ ಕವಿಸಾರ್ವಭೌಮರಿಗೆ ಎಷ್ಟುಮಟ್ಟಿಗೆ ಪ್ರಮಾಣಾರ್ಹನಾಗಿದ್ದ ನೆಂಬುದನ್ನು ನಾವು ಇಲ್ಲಿ ಕಂಠೋಕ್ತವಾಗಿ ಹೇಳಬೇಕಾದುದಿಲ್ಲ.

| ಕವಿರಾಜಮಾರ್ಗ. | ಶಾಂತಿಪುರಾಣ. |
|---|---|
| ಇಲ್ಲಿಗಿದು ತಕ್ಕುದಿಲ್ಲಿಗೆ \| | ಸಾರತರೋಕ್ತಿಗೆ ನೆಲ್ಲುಂ \| |
| ಪೊಲ್ಲದಿದೆಂದಱಿದು | ಮೋರುಂ ಗುಡಿದಂತೆ (ಗೋದಂತೆ) |
| ಸಮಱಿ ಬಲ್ಲಂತೆಲ್ಲಂ \|\| | ನೇಱಿತ ಲ್ತಾರ್ಪರವ \|\| |
| ನೆಲ್ಲುಂ ಮೊಸರುಂ ಗುಡಿದಂ \| | ಕೇರ್ರೆ ನಿಬಂಧನೆ ಟೀಕಾ \| |
| ತಲ್ಲದೆ ತಲ್ಲಣಿಸದಲಸದಿಡು | ಕಾರಂಗಲ್ಲದೆ ಪೆಱಂಗೆ |
| ಮೃದುಪದಮಂ \|\| II. 4, | ಕೋೞ್ಪ್ಪೋದಪುದೇ \|\| (X. 182.) |
| ಗೞಿಯಿಸಿದರ್ಥಂ ಸಲೆ ಪಾಂ \| | ಪೞಿಗಾಂಪರ ನುಡಿ ಮುತ್ತುಂ \| |
| ಗೞಿಯದೆಯುಂ ಶಬ್ದಮೊಂದ | ಮೆೞಿಸುಂ ಗೋದಂದದಕ್ಕೆ |
| ದಿರ್ದೊಡೆ ಮುತ್ತುಂ \|\| | ಭಾಷ್ಯಮನೊರ್ವಂ \|\| |
| ಮೆೞಿಸುಂ ಕೋದಂತಿರ್ಕ್ಕುಂ \| | ಕೞಿಯೋದಿದಾತನಲ್ಲದೆ \| |
| ಕೞಿಲ್ಲ್ಚಿ ಕಳೆಗೊಂಬ ಮುಂದೆ | ಬೞಿವೞಿಯುಂ ಬಂದು |
| ಬಾರದ ಪದಮಂ \|\| II. 5. | ಬರೆಯಲಾಗದಗಣ್ಯಂ \|\| (X, 181.) |

ಈ ಗ್ರಂಥವನ್ನು ಶೋಧಿಸಿ ಪರಿಷ್ಕರಿಸುವುದರಲ್ಲಿ, ಈ ಮೊದಲೇ ಮುದ್ರಿತ ವಾಗಿದ್ದ ಕವಿರಾಜಮಾರ್ಗದ ಪ್ರತಿಯೂ, ಮದರಾಸು ಪ್ರಾಚ್ಯಕೋಶಾಲಯದಲ್ಲಿ ರುವ ತಾಳಪತ್ರಪ್ರತಿಯೂ, ಮೈಸೂರು ಲೈಬ್ರರಿಯಲ್ಲಿಯ ಮತ್ತು ಬೊಮ್ಮರಸ ಪಂಡಿತರು ಕಳುಹಿಸಿದ ಪ್ರತಿಗಳೂ ನಮಗೆ ಸಹಾಯಕಗಳಾಗಿರುತ್ತವೆ.

ನಮಗೆ ಇದುವರೆಗೂ ದೊರೆತ ಸಾಧನಗಳನ್ನು ವಿಮರ್ಶೆಮಾಡಿ ತೋರಿ ಬಂದ ಅಭಿಪ್ರಾಯವನ್ನು ಇಲ್ಲಿ ಬರೆದಿರುವೆವು. ಸಹೃದಯರಾದ ವಾಚಕರು ಗುಣ ಲೇಶದಿಂದಾದರೂ ಸಂತೋಷಗೊಂಡು ಸೂಚನೆಗಳನ್ನು ಕೊಡುವರಾಗಿ ಕೋರುವ.

University Oriental Research Institute.
MADRAS.
15th April, 1929.

A. VENKATA RAU, B. A. L. T.,
Reader in Kanarese
PANDIT, H. SESHA AYYANGAR
Fellow in Kanarese.

ಶ್ರೀ.

ಶ್ರೀ ನೃಪತುಂಗದೇವಾನುಮತ

ಮಪ್ಪ

# ಕವಿರಾಜಮಾರ್ಗಂ.

## —: ಮಂಗಳಾಚರಣಂ. :—

ಕಂ|| ಶ್ರೀ ತಳ್ತುರದೊಳ್ ಕೌಸ್ತುಭ |
ಜಾತದ್ಯುತಿ ಬಳಸಿ ಕಾಂಡಪಟದಂತಿರೆ ಸಂ ||
ಪ್ರೀತಿಯಿನಾವಗಮುಗಲಳ್ |
ನೀತಿನಿರಂತರನುದಾರನಾ ನೃಪತುಂಗಂ || ೧||

ಕೃತಕೃತ್ಯಮಲ್ಲ ಸಪ್ರತಿ |
ಹತವಿಕ್ರಮನೊಸೆದು ವೀರನಾರಾಯಣನ ||
ಪ್ಪತಿಶಯ (ಧ) ವಳಂ ನಮಗೀ |
ಗೆತರ್ಕ್ಕಿತೋಪಸ್ಥಿತಪ್ರತಾಪೋದಯಮುಂ || ೨||

ಶ್ರೀ ವಿಶದವರ್ಣೆ ಮಧುರಾ |
ರಾವೋಚಿತೆ ಚತುರರುಚಿರಪದರಚನೆ ಚಿರಂ ||
ದೇವಿ ಸರಸ್ವತಿ ಹಂಸೀ |
ಭಾವದೆ ನೆಲೆಗೊಳ್ಗೆ ಕೂರ್ತು ಮನ್ಮಾನಸದೊಳ್ || ೩||

### ಪೂರ್ವಕವಿಸ್ತುತಿ.

ಪರಮಾಲಂಕಾರೋಚಿತ |
ವಿರಚನೆಗಳ್ ನೆಗೞ್ದುಮಾರ ವದನೋದರದೊಳ್ ||
ನೆರಮುಕ್ತಾ ಪರಮುಕವೀ |
ಶ್ವರರೆಮಗೀ ಕೃತಿಯೊಳಕೃತಕಾಚಾರಪರರ್ || ೪||

## ಪೀಠಿಕೆ.

### ಅತಿಶಯಧವಳಸಭಾವರ್ಣನಂ.

ಕಂ|| ಶ್ರುತದೊಳ್ ಭಾವಿಸಿ ನೋಡಿದೊಡೆ ।
(ಸತತಂ) ಕವಿವೃಷಭರಾ ಪ್ರಯೋಗಂಗಳೊಳಂ ||
ಕೃತಪರಿಚಯಬಲನಪ್ಪ ।
ನತಿಶಯಧವಳನ ಸಭಾಸದರ್ ಮನ್ನಿಸುವರ್ || ೫||

ವ್ಯಾಕರಣಕಾವ್ಯನಾಟಕ ।
ಲೋಕಕಳಾಸಮಯಮಾದಳಂಕೃತಿಗಳೊಳಂ ||
ವ್ಯಾಕುಳನಲ್ಲದನೇಕ ವಿ ।
ವೇಕಬೃಹಸ್ಪತಿಯು ನಗರಮಂ ಪುಗುತಪ್ಪಂ || ೬||

### ಅಪಂಡಿತನಿಂದೆ.

ಮೃಗಪಶುಶಕುನಿಗಣಂಗಳೊ ।
ಳಗಣಿತನಿಜಜಾತಿಜನಿತಭಾಷೆಗಳೆಂದುಂ ||
ನೆಗಟ್ದಂತಿರೆ ನರರೊಳಮು ।
ಪ್ರಗಲ್ಭವಚನಪ್ರವೃತ್ತಿ ನೆಗಟ್ಗಂ ಸಹಜಂ || ೭||

ಗುಣಮಿದು, ದೋಷಮಿದೆಂಬೀ ।
ಗಣಿಡಮನೆತ್ತಱಿಗುಮಶ್ರುತಪ್ರಕೃ(ತಿ)ಜನಂ ||
ತೃಣಸಸ್ಯಘಾಸವಿಷಯ ।
ಪ್ರಣಯಂ ಸಮವೃತ್ತಿಯಪ್ಪವೋಲ್ ಮೃಗಗಣದೊಳ್ || ೮||

### ಕಾವ್ಯಾಭ್ಯಾಸದ ಆವಶ್ಯಕತೆ.

ಅದಱಿಂ ಪರಮಾಗಮಕೋ ।
ವಿದನಪ್ಪುದು ಪೂರ್ವಕಾವ್ಯರಚನೆಗಳಂ ತಾಂ ||
ಮೊದಲೊಳ್ ಕಲ್ತಂಗಲ್ಲದೆ ।
ಪದದೊಳ್ ಜ್ಞಾನಂ ಬೆಡಂಗುಮಕ್ಕುಮ ಕೃತಿಯೊಳ್ || ೯||

ಕಂ|| ಜಡಜನ (ಮು) ಮೆಲ್ಲವೋದಂ ।
ತಡೆಯದೆ ಕಲ್ಗುಂ ಗುರೂಪದೇಶಕ್ರಮದಿಂ ॥
ನುಡಿವಲ್ಮೆಯಲ್ತದೇಂ ಕ ।
ಲ್ತೊಡನೋದುವುದಲ್ತೆ ಗಿಳಿಗಳುಂ ಪುರುಳಿಗಳುಂ ॥ ೧೦||

ಕಾವ್ಯರಚನಾಶಕ್ತಿಕಾರಣಂ.

ಪ್ರತಿಭಾವತ್ವಮುಮುಕೃತಕ ।
ಚತುರತೆಯುಂ ಪರಮಬುಧಜನೋಪಾಸನಮುಂ ॥
ಕೃತಿಪರಿಚಯಮುಂ (ತರ್ಕಂ) ।
ಪ್ರತೀತಿ (ಯಂ) ವಾಗ್ವಿದಗ್ಧತಾನಿಪುಣತೆ (ಯೊಳ್) ॥ ೧೧||

ಅಶಕ್ತಕವಿನಿಂದೆ.

ಪಸರಿಸಿದಾ ಬಗೆ ಮನದೊಳ್ ।
ಪೊಸತಾಗೆ ನೆಗಱ್ಚಲಱಿಯನಾ ರಚನೆಯೊಳೇಂ ॥
ಬಸನಂ ತನಗಿನಿತಱಿ ಬೇ ।
ವಸವೇಂ ಕವರ್ದವರುವೊಳರೆ ಕವಿಯಲ್ಲದರಂ || ೧೨||

ಸುಕವಿತ್ವಪ್ರಾಪ್ತಿವಿಧಾನಂ.

ಬಗೆಬಗೆದು ಕೇಳ್ದು ಬುಧರೊಲ ।
ವೊಗೆದಿರೆ ಹೃದಯದೊಳ ತಾಳ್ದಿ ಮಣಿಹಾರಂಬೋಲ್ ॥
ಸೊಗಯಿಸುವ ವಚನವಿರಚನೆ ।
ನೆಗಱ್ಚುಂ ಭಾವಿಸುವೊಡವಱ ಪೆಂಪತಿಸುಲಭಂ ॥! ೧೩||

ಪರಚ್ಛಾಯಾನುವೃತ್ತಿ ಕುಕವಿನಿಂದೆ.

ನೆನೆನೆನೆದು ಪೆಱರ ಮಾತುಗ ।
ಳನೆ ನೆಗಱ್ಚಿರ ಕೃತಿಯೊಳದು ವ(ರಂ)ನಗದ ಗುಹಾ ॥
ಧ್ವನಿಯವೊಲನರ್ಥವಚನಂ ।
ತನಗಾಗಿಸಲಱಿಯನುಚಿತವಾಕ್ಚತುರತೆಯಂ ॥ ೧೪||

### ಕವಿಜನ ತಾರತಮ್ಯಂ.

ಕಂ॥ ಕುಱಿತಂತು ಪೇೞ್ದ ಬಗೆಯುಂ ।
ತೆಱೆಪಿದರೆ ಪೇೞ್ಗಱಿಪಲಾರ್ಪವಂ ಮಾತಱಿವಂ ॥
ಕಿಱಿದಱೊಳೆ ಪಿರಿದು ಮರ್ಥಮ ।
ನಱಿಪಲ್ ನೆಱೆ ವ್ರಾತ ನಾತಸಿಂದಂ ನಿಪುಣಂ॥ ೧೫॥

ನುಡಿಯಂ ಛಂದದೊಳೊಂದಿರೆ ।
ತೊಡರ್ಚಲಱಿವಾತ ನಾತಸಿಂದಂ ಜಾಣಂ ॥
ತಡೆಯದೆ ಮಹಾಥ್ವಕೃತಿಗಳ ।
ನೊಡರಿಸಲಾಪಾರ್ಗತನೆಲ್ಲರಿಂದಂ ಬಲ್ಲಿಂ ॥ ೧೬॥

ಮಾತಱಿವರ್ ಕೆಲಬರ್ ಜಗ ।
ತೀತಳಗತಮನುಜರೊಳಗೆ ಮಾತಱಿವವರೊಳ್ ॥
ನೀತಿವಿದರಮಲಕವಿತಾ ।
ನೀತಿಯುತರ್ ಕೆಲರೆ ಪರಮಕವಿವೃಷಭರ್ಕ್ಕಳ್ ॥ ೧೭॥

### ಸುಕವಿಕಾವ್ಯಪ್ರಶಂಸೆ.

ಪಾಪಮಿದು ಪುಣ್ಯಮಿದು ಹಿತ ।
ರೂಪಮಿದಹಿತಪ್ರಕಾರಮಿದು ಸುಖಮಿದು ದುಃ ॥
ಖೋಪಾತ್ತಮಿದೆಂದಱಿಪುಗು ।
ಮಾ ಪರಮಕವಿಪ್ರಧಾನರಾ ಕಾವ್ಯಂಗಳ್ ॥ ೧೮॥

ಲೌಕಿಕಸಾಮಯಿಕೋರುವಿ ।
ವೇಕಮುಮಭ್ಯುದಯಪರಮನಿಃಶ್ರೇಯಸಮುಂ ॥
ಪ್ರಾಕಟಮಕ್ಕುಂ ವಿದಿತಾ ।
ನೇಕಕವೀಶಪ್ರಯೋಗಪದಪದ್ಧತಿಯೊಳ್ ॥ ೧೯॥

* ಶ ದ. ಸೂ. 110 ರಲ್ಲಿ, ಉದಾಹರಣೆಗಾಗಿ ಕೊಟ್ಟಿದೆ. (ಮಂಗಳೂರು ೨ ನೆಯ ಮುದ್ರಣ.) ಗುಣವಚನಕ್ಕೆ:— ಕಿಱಿದಱೊಳೆ 110 [illegible] ಣಂ.

## ಶಾಸ್ತ್ರಾರಂಭಂ.

### ಕಾವ್ಯಪ್ರಯೋಜನಂ

ಕಂ|| ಅಧಿಕೃತಸತ್ಪುರುಷಾರ್ಥ |
ಪ್ರಧಾನಧರ್ಮಾರ್ಥಕಾಮಮೋಕ್ಷಂಗಳವಾ ||
ಬುಧಜನವಿವಿಕ್ತಕಾವ್ಯ |
ಪ್ರಧಾರಿತಾರ್ಥಂಗಳಖಿಳಭುವನಹಿತಂಗಳ್ || ೨೦||

ಲೋಕದೊಳದಱಿಂ ಕಾವ್ಯ |
ಸ್ವೀಕರಣೋದ್ಯುಕ್ತನಕ್ಕೆ ಕವಿ ತನ್ನಱಿವಂ ||
ತಾಕಲ್ಪಾಂತಸ್ಥಾಯಿ |
ಶ್ರೀಕೀರ್ತಿವಧೂಪ್ರಧಾನವಲ್ಲಭನಕ್ಕುಂ || ೨೧||

### ಕಾವ್ಯಲಕ್ಷಣಂ.

ಕವಿಭಾವಕೃತಾನೇಕ |
ಪ್ರವಿಭಾಗವಿವಿಕ್ತಸೂಕ್ತಮಾರ್ಗಂ ಕಾವ್ಯಂ ||
ಸವಿಶೇಷಶಬ್ದರಚನಂ |
ವಿವಿಧಾರ್ಥವ್ಯಕ್ತಿವರ್ತಿತಾಲಂಕಾರಂ || ೨೨||

### ಕಾವ್ಯಪುರುಷಸ್ವರೂಪಂ.

ನರಲೋಕಚಂದ್ರ ಮತದಿಂ |
ಪರಮಾಲಂಕಾರಮುಂ ಶರೀರಮುಮೆಂದಿಂ ||
ತೆರಡಕ್ಕುಂ ಭೇದಂ ಬಹು |
ಪರಿಕರಮಾ ಕಾವ್ಯವಸ್ತುಪುರುಷಂಗೆಂದುಂ || ೨೩||

### ಕಾವ್ಯಶರೀರಭೇದಂ.

ಅವಱೊಳ್ ಶರೀರಮೆಂಬುದು |
ಕವಿಪ್ರಧಾನ ಪ್ರಯೋಗಪದಪದ್ಧತಿಯೊಳ್ ||
ದ್ವಿವಿಧಮೆಸಿಕ್ಕುಮದತಿಶಯ |
ಧವಳೋಕ್ತ ಕ್ರಮದೆ 'ಗದ್ಯಪದ್ಯಾ' ಖ್ಯಾತಂ || ೨೪||

### ಗದ್ಯಕಾವ್ಯಲಕ್ಷಣಂ.

ಕಂ|| ಪದಪಾದವಿಯುತನಿಯಮಾ ।
ಸ್ಪದಮಲ್ಲದಳಂಕೃತಂ ಕ್ರಿಯಾಕಾರಕದೊಳ್ ||
ಪುದಿದರ್ಥವ್ಯಕ್ತಿಯನೀ ।
ವುದು ' ಗದ್ಯ ' ಮನೇಕರೂಪಭೇದವಿಭಕ್ತಂ || ೨೫||

### ಸಮಸಂಸ್ಕೃತ ಗದ್ಯಕಾವ್ಯಂಗಳ್.

ಸದಮಳಸಮಸಂಸ್ಕೃತ (ಕಾ ।
ವ್ಯದ) ಹೃದಯಂ ' ಹರ್ಷಚರಿತ ಕಾದಂಬರಿ 'ಗಳ್ ||
ಮೊದಲಾಗಿ ನೆಗಳ್ದುವಿಡಱಿರೊಳ್ ।
ಸದಳಂಕಾರಂಗಳಖಿಳಕ(ವಿ)ವಿದಿತಂಗಳ್ || ೨೬||

### ಕನ್ನಡಕಾವ್ಯಭೇದ ವಿಚಾರಂ.

ಮಿಗೆ ಕನ್ನಡಗಬ್ಬಂಗಳೊ ।
ಳಗಣಿತಗುಣಗದ್ಯಪದ್ಯ ಸಮ್ಮಿಶ್ರಿತಮಂ ||
ನಿಗದಿಸುವರ್ ಗದ್ಯಕಥಾ ।
ಪ್ರಗೀತಿಯಿಂ ತಚ್ಚಿರಂತನಾಚಾರ್ಯರ್ಕಳ್ || ೨೭||

### ಕವಿ ಲಕ್ಷಣಂ.

ಸಕಳಕಳಾಭಾಷಾಲೌ ।
ಕಿಕಸಾಮಯಿಕಾದಿವರ್ಣನಾನಿರ್ಣಿಕ್ತಂ ||
ಪ್ರಕಟತರವಸ್ತುವಿಸ್ತರ ।
ವಿಕಲ್ಪ (ವಿ) ದನಲ್ಲದಾಗನಾಗದು ಪೇಟಲ್ || ೨೮||

### ಕನ್ನಡ ಗದ್ಯ ಕವಿಗಳ್.

ವಿಮಳೋದಯ, ನಾಗಾರ್ಜುನ ।
ಸಮೇತ ಜಯಬಂಧು, ದುರ್ವಿನೀತಾದಿಗಳೀ ||
ಕ್ರಮದೊಳ್ ನೆಗಱ್ಚಿ ಗದ್ಯಾ ।
ಶ್ರಮಪದಗುರುತಾಪ್ರತೀತಿಯಂ ಕೆಯ್ಕೊಂಡರ್ || ೨೯||

### ಪದ್ಯಕಾವ್ಯ ಲಕ್ಷಣಂ.

ಕಂ|| ಪದ್ಯಂ ಸಮಸ್ತಜನತಾ ।
ಹೃದ್ಯಂ ಪದ್ಧವಿದಿತಪಾದನಿಯಮನಿವೇದ್ಯಂ ||
ವಿದ್ಯಾಪಾರಪರಾಯಣ ।
ಮಾದ್ಯಂ ಸದ್ವೃತ್ತಿವೃತ್ತಜಾತ್ಯಾಯತ್ತಂ || ೩೦||

### ಸಂಸ್ಕೃತ ಪದ್ಯ ಕವಿಗಳ್.

ಪ್ರಣುತ ಗುಣಸೂರಿ, ನಾರಾ ।
ಯಣ, ಭಾರವಿ, ಕಾಳಿದಾಸ, ಮಾಘಾದಿಗಳೀ ||
ಗಣಿದದೊಳೆ ಮಹಾಕಾವ್ಯ ।
ಪ್ರಣಯಮನಾಗಿಸಿದರಮಳಕವಿವೃಷಭರ್ಕಳ್ || ೩೧||

### ದೇಶೀಯಗಬ್ಬಂಗಳ ಪೆಸರ್.

*ನುಡಿಗೆಲ್ಲಂ ಸಲ್ಲದ ಕ ।
ನ್ನಡದೊಳ್ ಚತ್ತಾಣಮುಂ ಬೆದಂಡೆಯು ಮೆಂದೀ||
ಗಡಿನ ನೆಗೞ್ತಿಯ ಕಬ್ಬದೊ ।
ಳೊಡಂಬ (ಡಂಮಾ)ಡಿದರ್ ಪುರಾತನಕವಿಗಳ್ || ೩೨||

### ಕನ್ನಡ ಪದ್ಯ ಗ್ರಂಥ ಕರ್ತೃಗಳ್.

ಪರಮ ಶ್ರೀವಿಜಯ ಕವೀ ।
ಶ್ವರ ಪಂಡಿತ ಚಂದ್ರ ಲೋಕಪಾಲಾ ದಿಗಳಾ ||
ನಿರತಿಶಯ ವಸ್ತುವಿಸ್ತರ ।
ವಿರಚನೆ ಲಕ್ಷ್ಯಂ ತದಾದ್ಯಕಾವ್ಯಕ್ಕೆಂದುಂ || ೩೩||

### ಬೆದಂಡೆಗಬ್ಬದ ಲಕ್ಷಣಂ.

ಕಂದಮುಮಮಳಿನವೃತ್ತಮು ।
ಮೊಂದೊಂದೆಡೆಗೊಂದು ಜಾತಿ ಜಾ(ಣೆಸೆ)ಯೆ ಬೆಡಂ ||
ಗೊಂದಿವಱೊಳಮರೆ ಪೇೞಲ್ ।
ಸುಂದರರೂಪಿಂ ಬೆದಂಡೆ ಗಬ್ಬ ಮದಕ್ಕುಂ || ೩೪||

* ಇದುಶಬ್ದಮಣಿದರ್ಪಣದಲ್ಲಿ ಉದ್ಧೃತವಾಗಿದೆ. (ಸೂ. 98, ಮಂಗಳೂರಿನ 2 ನೆಯ ಮುದ್ರಣದ ಪ್ರತಿ, ಪು. 127) ಇಲ್ಲಿ ಇದು "ಪರಮ....."(I.33)ಎಂಬ ಕಂದದ ಮುಂದಿರಬೇಕು.

### ಚತ್ತಾಣಗಬ್ಬದ ಲಕ್ಷಣಂ.

ಕಂದಂಗಳ್ ಪಲವಾಗಿರೆ ।
ಸುಂದರವೃತ್ತಂಗಳಕ್ಕರಂ ಚೌಪದಿ ಮ ॥
ತ್ತಂ ದಲ್ ಗೀತಿಗೆ ತ್ರಿವಿಧಿಗ ।
ಳಂದಂಬೆತ್ತಿಸೆಯೆ ಪೇೞ್ವೊಡದು ಚತ್ತಾಣಂ ೩೫॥

### ಕನ್ನಡನಾಡಿನ ಸೀಮೆ.

ಕಂ॥ ಕಾವೇರಿಯಿಂದಮಾಗೋ !
ದಾವರಿ (ವರ) ಮಿರ್ದ್ದ ನಾಡದಾ ಕನ್ನಡದೊಳ್ ॥
ಭಾವಿಸಿದ ಜನಪದಂ ವಸು ।
ಧಾವಲಯವಿಲೀನವಿಶದವಿಷಯವಿಶೇಷಂ ॥ ೩೬॥

### ತಿರುಳ್ಗನ್ನಡದ ನಾಡು.

ಅದಱೊಳಗಂ "ಕಿಸುವೊೞಲ್"ಲಾ ।
ವಿದಿತಮಹಾ "ಕೊಪಣ" ನಗರದಾ "ಪುಲಿಗೆಱೆ"ಯಾ ॥
ಸದಭಿಸ್ತುತಮ "ಪ್ಪೊಂಕುಂ" ।
ದ"ದ ನಡುವಣ ನಾಡೆ ನಾಡೆ ಕನ್ನಡದ ತಿರುಳ್ ॥ ೩೭॥

### ಕನ್ನಡನಾಡವರ ಚಾತುರ್ಯ.

ಪದನಱಿದು ನುಡಿಯಲುಂ ನುಡಿ ।
ದುದನಱಿದಾರಯಲುಮಾರ್ಪರಾ ನಾಡವರ್ಗಳ್ ॥
ಚದುರರ್ ನಿಜದಿಂ ಕುಱಿತೋ ।
ದದೆಯುಂ ಕಾವ್ಯಪ್ರಯೋಗಪರಿಣತಮತಿಗಳ್ ॥ ೩೮॥

ಕುಱಿತವ(ರ)ಲ್ಲದೆ ಮತ್ತಂ ।
ಪೆಱರುಂ ತಂತಮ್ಮ ನುಡಿಯೊಳ್ಳಿ (ಲ್ಲರ್)ಜಾಣರ್ ॥
ಕಿಱುವಕ್ಕಳ್ ಮೂಮೂಗರು ।
ಮಱಿಪಲ್ಕಱಿವರ್ ವಿವೇಕಮಂ ಮಾತುಗಳಂ ॥ ೩೯॥

ಕಂ|| ಜಾಣರ್ಕಳಲ್ಲದವರುಂ ।
ಪೂ(ಣಿ)ಗರಱಿಯದೆಯು ಮಱಿ(ದ)ವೋಲವಗುಣದಾ ||
ತಾಣಮ(ಧಿ)ನಿ (ಸೆ)ಡೆವೊತ್ತೊಡೆ।
ನೂಣದೆ (ಜ)ಡಿದದನೆ ಕೃತಿಗಳಂ ಕೆಡೆ ನುಡಿವರ್ || ೪೦||

ಸಕ್ಕದಮುಂ ಪಾಗದಮುಮ ।
ದಕ್ಕುಂ ಬಗೆದಂತೆ ಸಮಱಿ ಪೇೞಲ್ ಮುನ್ನಂ ||
ನಿಕ್ಕುವನೊಳವಪ್ಪುದಱಿಂ ।
ತಕ್ಕಂತವಱವಱ ಲಕ್ಷ್ಯಮಂ ಲಕ್ಷಣಮಂ || ೪೧||

ಅರಿದಾದಂ ಕನ್ನಡದೊಳ್ ।
ತಿರಿಕೊಱಿ (ಗೊಂ)ಡಱಿ(ಯೆ)ಪೇೞ್ವೆನೆಂಬುದಿ(ದಾ)ಗ್ಗ್ರಂ ||
ಪರಮಾಚಾರ್ಯರವೋಲ್ ಸೈ ।
ತಿರಲಱಿಯರ್ ಕನ್ನಡಕ್ಕೆ ನಾಡವ (ರೊವಜರ್) || ೪೨||

ಕಾವ್ಯದೋಷನಿಂದೆ.

ಅವಗುಣ (ವಿ) ನಿ ತಾದೊಡಮಾ ।
ಕವಿತಾಬಂಧಮನಶೇಷಮುಂ ದೂಷಿಸುಗುಂ ||
ಸವಿಲಾಸಲೋಲಲೋಚನ ।
ವಿವರಮನೆಡೆವೆತ್ತ ಕಸದವೋಲನವರತಂ || ೪೩||

ಅದಱಿಂದಲಸದೆ ಪೀನಂ ।
ಪಡೆಯದೆ ಪಾಂಗಱಿದು ದೋಷಮಂ ಪಿಂಗಿಸಿ,ತ ||
ಪ್ಪದೆ ಬಗೆದು ಪೇೞ್ವುದಾಗಮ ।
ಮುದಾರನೃಪತುಂಗದೇವ ವಿದಿತಕ್ರಮದಿಂ || ೪೪||

ಪುರಾಣ ಕವಿಮಾರ್ಗ ದೋಷಂಗಳ್.

* ಗೀತಿಕೆ॥ (ಕಾಣನೇ) ಗೆಯ್ದುಂ ತನ್ನ ದೋಷಮುಂ ।
ಕಾಣದಂತೆಂದುಂ ಕಣ್ಗಳ್ ತಮ್ಮ ಕಾಡಿಗೆಯುಂ ॥
ಪೂಣಿಗನಾದುದಱಿಂ ಪೆಱರಿಂ ।
ಜಾಣ (ರಿನೋಡಿಸಿ) ಪೇೞ್ವುದು ಕಬ್ಬಮುಂ ॥ ೪೫॥

ಕನ್ನಡದೇಶಿಯ ಅನಂತತೆ.

ಕಂ॥ ದೋ (ಷ) ಮಿನಿತೆಂದು ಬಗೆದು ।
ದ್ಭಾಷಿಸಿ ತಱಿಸಂದು ಕನ್ನಡಂಗಳೊಳೆಂದುಂ ॥
ವಾಸುಗಿಯುಮಱಿಯಲಾಱದೆ ।
ಬೇಸಱುಗುಂ ದೇಶಿ ಬೇಱೆ (ವೇ) ಱಪ್ಪುದಱಿಂ ॥ ೪೬॥

(ಇಂ) ತುಂ ಪುರಾಣಕವಿಗಳ ।
ಸಂತ (ತ) ಗತಮಾರ್ಗಗಳಿತದೋಷಂಗಳುಮಂ ॥
ಚಿಂತಿಸಿ ಮತ್ತನ್ನಱಿವುದು ।
ಮಂ ತಱಿಸ(ಲ)ಬುಧಜನಕ್ಕೆ ಕೆಲವಂ ಪೇೞ್ವೆಂ ॥ ೪೭॥

ನೆಲಸಿದ ಕಾವ್ಯಂ ಕಾವ್ಯ ।
ಕ್ಕೆ ಲಕ್ಷಣಂ ಸತತಮುಂದೆ ಪೞಗನ್ನಡಮುಂ ॥
ಪೊಲ(ಗಿ)ಡಿಸಿ ನುಡಿವರಾಗಮು ।
ಬಲಹೀನರ್ ದೇಸಿಯಲ್ಲಪೆಂದಱಿವುದುರ್ಗಂ ॥ ೪೮॥

ಪೞಗನ್ನಡದ ಸ್ವರೂಪಂ.

ಪೊಡವಿಪತಿ ಗೊ(ರವ)ನೆನೆ(ಪೇ) ।
ೞ್ಪೆಡೆಯದು ವಪೆಕರಿಸಿ ಕಬ್ಬಿಗದರ್ಪ (ಱ)ನೆಯುಂ ॥
(ಹಡವ ಸಮರೆನಿಟ್ಟ) ನುಗೆಂ ? ।
ಮುಡಿಯೊ(ೞ)ಮಾರ್ಗಂಬು ನುಡಿವ ಪೞಗನ್ನಡಮುಂ ॥ ೪೯॥

* ಈ ಗೀತಿಕೆಯ ಲಕ್ಷಣವು ಛಂದೋಂಬುಧಿಯಲ್ಲಿ ಹೇಳಿರುವ ಗೀತಿಕೆಯ ಲಕ್ಷಣಕ್ಕೆ ಹೋಲುವುದಿಲ್ಲ. ಛಂ- ಪದ್ಯ ೨೫೬ (ಕ. ಕಾ. ಕ. ಮುದ್ರಣ)

ಪೞಗನ್ನಡದ ನಿಂದೆ.

ಕಂ|| ದೊರೆಕೊಂಡಿರೆ ಸೊಗಯಿಸುಗುಂ ।
ಪುರಾಣಕಾವ್ಯಪ್ರಯೋಗದೊಳ್ ತತ್ಕಾಲಂ ॥
ವಿರ(ಸಂ) ಕರಮೆವು ದೇಸಿಗೆ ।
ಜರದ್ವಧೂವಿಷಯಸುರತರಸರಸಿಕತೆವೋಲ್ ॥ ೫೦||

ಸಮಸಂಸ್ಕೃತ ಮಿಶ್ರಣಾಭ್ಯುಪಗಮ.

ಸಮಸಂಸ್ಕೃತಂಗಳೊ (ಳ್ತ) ।
(ಳ್ತ್ರ)ಮರ್ದಿರೆ ಕನ್ನಡಮ ನಱಿದು ಪೇ(ೞ್ಗಂ) ಬುಧರಾ ॥
ಗಮಕೋವಿದನಿಗದಿತಮಾ ।
ರ್ಗ್ಗವಿದಂ ಬೆರಸಲ್ಕಮಾಗದೇ ಸಕ್ಕದದೊಳ್ ॥ ೫೧||

ವಾಕ್ಯದಲ್ಲಿ ಬೆರಸಲಾಗದ ಸಂಸ್ಕೃತಾವ್ಯಯಂಗಳ್.

ಆಹರಹರುಚ್ಚೈ ರ್ನೀಚೈ ।
ರ್ಮುಹುರ್ಮುಹುರಿತಸ್ತತಃ ಪುನ [ಃ]ಪುನರಂತ ॥
ರ್ಬಹಿರಾವಿಹ (*ಪ್ರಾ)ದುರಹೋ ।
[ಸಹ] ಸಾದಿಗಳವ್ಯಯಂಗಳಸಹಾಯಂಗಳ್ ॥ ೫೨||

ಬೆರಸಿರೆ ಕನ್ನಡದೊಳ್ ಬಂ ।
ಧುರಮಾಗದು ಕಾವ್ಯರಚನೆ ಪೇ(ೞ್ವೊ)ಡೆ ಪೀನಂ ॥
ಪರುಷತರಮಕ್ಕುಮೊತ್ತುಂ ।
ಗರಡೆಯ ಮದ್ದಳೆಯ ಜರ್ಝರಧ್ವನಿಗಳವೋಲ್ ॥ ೫೩||

ಕೇವಲಾವ್ಯಯ ಪ್ರಯೋಗ ದೋಷಕ್ಕೆ ಲಕ್ಷ್ಯಂ.

ಬಹಿರಂತರುಪವನಂಗಳೊ ।
ಳಹರಹಮಾ ಪರಭೃತಂಗಳುಲಿವ ರವಂಗಳ್ ॥
ಸಹಸಾ ತಳವಮಳ (ಗೊ)ಳಿಸದು ।
ವಹೋ ಮನಂಗಳ ನಿತಸ್ತತಂ ವಿರಹಿಗಳಾ ॥ ೫೪||

* ಇಲ್ಲಿ ಪ್ರಾ ಎಂಬಕ್ಷರಕ್ಕೆ ಶೈಥಿಲ್ಯವನ್ನು ಹೇಳಬೇಕು (ಇದಕ್ಕೆ ಕನ್ನಡದಲ್ಲಿ ಆಧಾರ ವಿಲ್ಲ. ಪ್ರಾಕೃತದಲ್ಲಿ ಮಾತ್ರ ಪ್ರ. ಹ್ರ. ಇವೆರಡಕ್ಕೆ ಶೈಥಿಲ್ಯವನ್ನು ಹೇಳಿದೆ)

ಸಂಸ್ಕೃತಾವ್ಯಯಪ್ರಯೋಗ ದೋಷರಾಹಿತ್ಯಪ್ರಕಾರಂ.

ಕಂ|| ವಿದಿತ ಸಮಸಂಸ್ಕೃತೋದಿತ |
ಪದಂಗಳೊಳ್ ಪುದಿದು ಬೆರಸಿ ಬರೆ ಕನ್ನಡದೊಳ್ ||
ಮುದಮನವು ತ(ಕ್ಕು)ಮತಿಶಯ |
ಮೃದಂಗಸಂಗೀತಕಾದಿಮಧುರರವಂಬೋಲ್ || ೫೫||

ನಿರ್ದೋಷಕ್ಕೆ ಲಕ್ಷ್ಯಂ.

ಬಹಿರುದ್ಯಾನಾಂತರದೊಳ್ |
ಸಹಸೋದಿತ ಮತ್ತಕೋಕಿಲೋಚ್ಚೈರ್ಧ್ವಾನಂ ||
ಮುಹುರಾಕರ್ಣಿಸೆ ಪಡೆದ |
ತ್ತಹರ್ನಿಶಂ ಪೆರ್ಚನಂತರಂಗಕ್ಕೆನ್ನಾ || ೫೬||

ಸಮಸಂಸ್ಕೃತ ಪ್ರಯೋಗಾಭ್ಯುಪಗಮಂ.

ನೆಗೞ್ದಿರ್ದ ಕನ್ನಡಂಗಳೊ |
ಳಗಣಿತಗುಣವಿದಿತಸಂಸ್ಕೃತೋಕ್ತಕ್ರಮಮಂ ||
ಬಗೆದೊಂದುಮಾಡಿ ಪೇೞ್ದೊಡೆ |
ಸೊಗಯಿಸುಗುಂ ಕಾವ್ಯಬಂಧಮೆಂದುಮನಿಂದ್ಯಂ || ೫೭||

ಅರಿಸಮಾಸದೋಷಪ್ರಕಾರಂ.

ತಱಿಸಂದಾ ಸಕ್ಕದಮುಮ |
ನಱಿಯದೆ ಕನ್ನಡಮುಮಂ ಸಮಾಸೋಕ್ತಿಗಳೊಳ್ ||
ಕುಱಿತು ಬೆರಸಿದೊಡೆ ವಿರಸಂ |
ಮಱುಗುವ ಪಾಲ್ಗಳ್ಗೆಯ್ಯ ಪನಿಗಳಂ ಬೆರಸಿದವೋಲ್ || ೫೮||

ಅರಿಸಮಾಸ ದೋಷಲಕ್ಷ್ಯಂ.

*ಅರಸುಕುಮಾರನ ನಾಯತ |
ತರಕಡೆಗಣ್ಣಿಂ (ದೆ ನೋಡಿ) ಕೆಳದಿಸಮೇತಂ ||
ಪರಿಗತನಗೆಯಿಂದಿರ್ದ್ದಂ |
ಗುರುನಾಣ್ಬರದಿಂದಮೆಱಗಿ ಮುಖ(ದಾ)ವರೆಯುಂ || ೫೯||

* ಇದು ಶಬ್ದಮಣಿದರ್ಪಣದಲ್ಲಿ ಉದ್ಧೃತವಾಗಿದೆ.

### ಸಮಾಸನಿರ್ದೋಷಲಕ್ಷ್ಯಂ.

ಕಂ|| ನರಪತಿತನಯನ ನಾಯತ |
ತರಳಾಪಾಂಗದೊಳೆ ನೋಡಿ ಕೆಳದಿಯರೊಡನಾಂ ||
ಪರಿಗತಹಾಸ್ಯದೊಳಿರ್ದ್ದೆಂ |
ಗುರುಲಜ್ಜಾಭರದಿನೆಱಗಿ ಮುಖಸರಸಿಜಮಂ || ೬೦||

ಎಂದಿಂತು ಸಮಾಸೋಕ್ತಿಯೊ |
ಳೊಂದಾಗಿರೆ ಸಕ್ಕದಂಗಳುಂ ಕನ್ನಡಮುಂ ||
ಸುಂದರಮಕ್ಕುಂ ಕವಿಪದ |
ವೊಂದಿದವೋಲ್ ಕನಕರಚನೆಯೊಳ್ ಮಣಿನಿಕರಂ || ೬೧||

### (ಕ) ಕಾವ್ಯದೋಷಂಗಳ್.

ಶ್ರುತದುಷ್ಟ ಮರ್ಥದು (ಷ್ಟಂ) |
ಶ್ರುತಿಕಷ್ಟಂ ಕಲ್ಪನೋಕ್ತಿ ಕಷ್ಟ (ಮು)ಮೆಂದೀ ||
ಕೃತಕೃತ್ಯಮುಲ್ಲ ವಲ್ಲಭ |
ಮತದಿಂ ನಾಲ್ಕಕ್ಕುಮಿಲ್ಲಿ ಕೃತಿದೋಷಂಗಳ್ || ೬೨||

### ಶ್ರುತದುಷ್ಟಲಕ್ಷ್ಯಂ.

ನಿಲ್ಲೋಳಂ ಬ (ರ್ಪು)ದು ಸೈ |
ತಲ್ಲ (ರಂ) ದೂಡ(ಂ)ರಮೆಡೆತು(ನೆ)(ಗ)ಪ್ಪೂರ್ವರಂ ? ||
ಕಲ್ಲುಲ್ಲಿಂದೋಡುವಮೆಂ |
ಬಲ್ಲುಣ್ಣಂ ತಂದ ಕೂಟಿನೂಸಂಗಮದೊಳ್ || ೬೩||

### ಅರ್ಥದುಷ್ಟಲಕ್ಷ್ಯಂ.

ನೆ(ರೆ)ದೂರ್ಧ್ವರೇತನೊಳ್ ಪು(ರು) |
ಹಿರಣ್ಯರೇ (ತೋ) ತಿತೀವ್ರನೊಳ್ ಮುನಿವರನೊಳ್ ||
ಪರಮಭಗಸಹಿತೆ ಮುದದಿರೆ |
ಪರಿಶ್ರಮಕ್ಕೆನ್ನ ಸಿಪ್ಪಿರ್ವಶೇಷನೊಳಾಗಳ್ || ೬೪||

---

(ಕ) ಇವು ಭಾಮಹನಿಂದ ಆದಿಯಲ್ಲಿ ಉಕ್ತವಾಗಿರುವ ಕಾವ್ಯದೋಷಂಗಳ್.

### ಶ್ರುತಿಕಷ್ಟಂ.

ಕಂ|| ಪರದರ್ಗ್ಗಾ ಪಾರ್ವ್ವರ್ಗ್ಗಾ |
(ಯ್ತ್ರ) ಸರ್ಗ್ಗಾ ಕುಡಿಯುರಪ್ಪ ನಾಲ್ವರ್ಗ್ಗಾಗಳ್ ||
ಸ್ಥಿರ (ಗೋ)ಪಾಧ್ಯಾಯಕ್ಷ್ಮಾ |
ಪರಿಪಾಲ್ಯಕ್ಷೇ (ತ್ರ) ಕರ್ಷಣಂಗಳ್ ಕ್ರಿಯೆಗಳ್ || ೬೫||

### ಕಲ್ಪನೋಕ್ತಿಕಷ್ಟಂ.

ಮಸಗಿ ಬೆ(ಸೆದಿರ್ದು) ವಿವರಮು |
ನಸಿಯುದಱಿಡೆವೊತ್ತಿ ಪೊಕ್ಕು ಕೆಲನಂ ಕೊರ್ಬು ||
ತ್ತೆಸೆದು ಬಿದಿರ್ವಾರ್ದು ಮೇಲಿಗ್ಗೇ |
ಲಿಗ್ಗಿ ಸಮಂಜಸನಿಕ್ಕಿ ಮಿಕ್ಕನರಿಪಾಹಿಸಿಯುಂ || ೬೬||

ಕುಱಿತಂತೆ ಪೇಳ್ದು ನಾಲ್ಕುಂ |
ಕುಱಿಪುಗಳಿಂದಱಿದು ಪರರ ದೋಷಂಗಳುಮಂ ||
ಪೆಱವುಮನೀಮಾಲಿಕ್ಕಿಯೊಳಂ |
ತೋಱಿವುದು ತೋಱುವಂತಸಾಧುಜನಸಂಗತಿಯುಂ || ೬೭||

### ಶ್ರುತಿಕಷ್ಟ ದೋಷಾನಿಂದ್ಯತೆ.

ಪಿಂಗೆ ದುಷ್ಕರಕಾವ್ಯಂಗಳೊ |
ಳಗರ್ಹಿತಪ್ರಾಯಮಕ್ಕುಮಾ ಶ್ರುತಿಕಷ್ಟಂ ||
ಪಗರಣದೊಳುಱಿದ ಮೂಱುಂ |
ನಗಿಸುಗುಮಪ್ಪುದಱಿನಲ್ಲಿಗಂತವದೋಷಂ || ೬೮||

### (ಖ) ಕಾವ್ಯದೋಷಂಗಳ್.

ಯುತಿಭಂಗ, ಮರ್ಥಶೂನ್ಯಂ, |
ಸತತ ವಿರುದ್ಧಾರ್ಥ, ಮುಕ್ತ ಪುನರುಕ್ತಾರ್ಥಂ, ||
ಚ್ಯುತಯಾಥಾಸಂಖ್ಯಂ, ವ್ಯವ |
ಹಿತ, ಮಚ್ಛಂದಂ, ವಿಸಂಧಿಕಂ, ನೇಯಾರ್ಥಂ || ೬೯||

(ಖ) ದಂಡಿಯಿಂದುಕ್ತವಾದ ಕಾವ್ಯದೋಷಂಗಳ್.

ಕಂ|| ಆಗಮ ಸಮಯ ನ್ಯಾಯವಿ |
ಭಾಗ ಕಳಾ ಕಾಲ ಲೋಕ ದೇಶ ವಿರುದ್ಧಂ ||
ಭೋಗಿವಿಷಂಬೋಲ್ ಪ್ರಾಣ |
ತ್ಯಾಗಮನಾಗಿಸುಗುಮಮಳಕೃತಿವಧುಗಿನಿತುಂ || ೨೦||

ಯತಿಲಕ್ಷಣಂ.

ಯತಿ ಯೆಂಬುದುಸಿರ್ವ ತಾಣಂ|
ಕೃತಾಸ್ಪದಂ ವೃತ್ತಜಾತಿಪದಪದ್ಧತಿಯೊಳ್ ||
ಸತತಂ ಛಂದೋವಿದಿತ |
ಪ್ರತೀತ ಶಾಸ್ತ್ರೋಕ್ತಮಾರ್ಗದಿಂದಱಿವುದಿದಂ || ೨೧||

ಯತಿಭಂಗಲಕ್ಷ್ಯಂ.

ಕೇಡಡಸಿದ್ದಂದು ಬಗೆಯ್ದಂ |
ನೋಡದು ಕೂಡಿದುದು ಮಱಿದು ವಿಪರೀತ (ಮುಮಂ)||
ಮಾಡುಗುಮದಱಿಂ ಕರ್ಮ |
ಕ್ರೋಡಿ ಬರ್ದುಂಕಲ್ಕಮಱಿದರಾರ್ ಭೂತಳದೊಳ್ || ೨೨||

(೧) ಯತಿಭಂಗಲಕ್ಷಣಂ.

ತಡತಡಿಸಿ ಯತಿಯನಿಂತಿರೆ |
ತೊಡರ್ಚಿ ಕೆಡೆ ಪೇಱಿಪ್ಪೊಡಕ್ಕುಮದು **ಯತಿಭಂಗಂ** ||
ಸಡಿಲಿಸದಲಸದರಂ ಪೇ |
ಱಿಪ್ಪೆಡೆಯೊಳ್ ನಿಲೆ ಪೇಱಲಾರ್ಪೊಡಂತದು ದೋಷಂ || ೨೩||

ಯತಿಗೆ ಲಕ್ಷ್ಯಂ.

ಕೇಡಡಸಿದೊಡಂ ಬಗೆಯ್ದುಂ |
ಕೂಡದು ಕೂಡಿದುದು ಮಱಿದು ವಿಪರೀತಮುಮಂ ||
ಮಾಡುಗುಮದಱಿಂ ಕರ್ಮ |
ಕ್ರೋಡಿ ಬರ್ದುಂಕಲ್ಕೆ ಕಲ್ತರಾರ್ ಬಿನ್ನಣಮುಂ|| ೨೪||

ಕನ್ನಡದೊಳ್ ಯತಿವಿಲಂಘನಾಭ್ಯುಪಗಮಂ.

ಕಂ|| ದೋಸಮನಿ ಗುಣದವೋಲು |
ದ್ಭಾಸಿಸಿ ಕನ್ನಡದೊಳೊಲ್ದು ಪೂರ್ವಾಚಾರ್ಯರ್ ||
ಪೇಸಿಯೆನೆ ನಿಱಿಸಿ ಖಂಡ |
ಪ್ರಾಸಮನತಿಶಯಮಿದೆಂದು ಯತಿಯಂ ಮಿಕ್ಕರ್ || ೭೫||

ಯತಿವಿಲಂಘನದ ಸುಂದರತೆ.

ನಿರತಿಶಯಮಕ್ಕುಮದು ಬಂ |
ಧುರಕವಿಜನತಾಪ್ರಯೋಗಸಂಬಂಧನದಿಂ ||
ಗುರುಜಘನಸ್ತನಭರಮಂ |
ಥರಲೀಲಾಲಸವಿಳಾಸಿನೀಚರಿತಂಬೋಲ್ || ೭೬||

ಯತಿನಿಯತಸ್ಥಳಂಗಳ್.

ಅಂತುಂ ಯತಿಯಂ ಪೇೞ್ಗ |
ರ್ಪಂತಾದ್ಯದೊಳಲಸದಾರ್ಯೆಯೊಳ್ ಕಂದದೊಳಂ ||
ಸಂತಂ ದ್ವಿತೀಯಪಾದಗ |
ತಾಂತದೊಳಕ್ಕದು ಚತುಷ್ಪದೀಪದವಿಗಳೊಳ್ || ೭೭||

(೨) ಅರ್ಥಶೂನ್ಯ ದೋಷಲಕ್ಷಣಂ.

ಸಮುದಾಯಾರ್ಥಮನಾರಯೆ |
ಸಮನಿಸುವರ್ಥಪ್ರತೀತಿ ತೋಱದೊಡೆಲ್ಲಂ ||
ಕ್ರಮಮಕ್ಕುಮರ್ಥಶೂನ್ಯಂ |
ಸಮಸ್ತಕವಿವೃಷಭದೂರದೂಷಿತಮಾರ್ಗಂ || ೭೮||

ಲಕ್ಷ್ಯಂ.

ಮುನಿ ವೀತರಾಗನೆಂದುಂ |
ಬನಮಂ ಸಾರ್ತಕ್ಕುಮಾವ ತೆಱದಿಂ ಪೋಪಂ ||
ಮನಮಂ ಜುಗುಮಱಿಯದವಂ |
ಮುನಿಗುಂ ಪಗೆವಂಗೆ ಪಾಪಕರ್ಮಂ ಪೊಲ್ಲಂ || ೭೯||

ಸ್ಥಿರಮರ್ಥಶೂನ್ಯ ಮೆಂಬುದು |
ದುರುಕ್ತವಿದನಿಂತು ಪೇೞ್ದೊಡೆಲ್ಲಂ ಪೀನಂ ||
ಮರುಳುಂ ಮದಿರಾಪರವಶ |
ಶರೀರನುಂ ಪೇೞ್ಗ ಮಾವನಱಿವಂ ಪೇೞ್ಗಂ || ೬೦||

(೩) ವಿರುದ್ಧಾರ್ಥದೋಷಲಕ್ಷಣಂ.

ಪರಿಗೀತಾರ್ಥಂ ಪೂರ್ವಾ |
ಪರದೊಳ್ ಬಗೆವಾಗಳೆಂದುವೊಂದಱೊಳೊಂದುಂ ||
ದೊರೆಕೊಂಡೊಂದದೊಡದು ದು |
ಷ್ಕರಮೆ ವಿರುದ್ಧಾರ್ಥ ಮೆಂಬುದಾದಂ ದೋಷಂ || ೬೧||

ಲಕ್ಷ್ಯಂ.

ಅರಿನೃಪಬಲಮಂ ಗೆಲ್ದುರು |
ಪರಾಕ್ರಮಕ್ರಮದೆ ಶೌರ್ಯಮಂ ಪ್ರಕಟಿಸು ನೀಂ ||
ನರಮಹಿ(ತಾ) ನಿನಗೇನಹಿ |
ತರುವೊಳರೇ ಸತತಪರಹಿತಾಚಾರಪರಾ || ೬೨||

ಉಪಸಂಹೃತಿ.

ಇದು ವಿದಿತವಿರುದ್ಧಾರ್ಥ |
ಕ್ಕುಬಾಹ್ಯತಂ ಹ್ರರಣಮಾತ್ರ ಮಿನ್ನುಪ್ಪುವನುಂ ||
ಸದಭಿಮತಕಾವ್ಯಪದವಿಧಿ |
ವಿದೂರಗತಮಾಗೆ ಪರಿಹರಿಕ್ಕೆ ಬುಧರ್ಕಳ್ || ೬೩||

(೪) ಪುನರುಕ್ತದೋಷಲಕ್ಷಣಂ.

ಕಂ|| ಪುನರುಕ್ತಮೆಂಬುದಕ್ಕುಂ |
ನೆನೆಯದೆ ಪೂರ್ವೋದಿತಾರ್ಥಪದಪದ್ಧತಿಗೊಂ ||
ದಿನಿಸುಂ ವಿಶೇಷಮಿಲ್ಲದೆ |
ಜನಿಯಿಸಿದ ಪದಾರ್ಥಮದಱಿದೀದೃಷ್ಟಾಂತಂ || ೬೪||

ಲಕ್ಷ್ಯಂ.

ತ್ರಿದಶಸುರಲೋಕವಾಸಾ |
ಸ್ಪದಮುಂ ಪೆಱುಗುಂ ಮನುಷ್ಯಮನುಜಂ ಸಿಂನಾ ||
ಪದಚರಣಯುಗದ್ವಯಮುಂ |
ಮುದದಱ್ತಿಯೆ ಬಗೆದು ನೆನೆವ ನನುದಿನ ಮೆಂದುಂ || ೭೫||

(೫) ಯಾಥಾಸಂಖ್ಯ ಚ್ಯುತಯಾಥಾಸಂಖ್ಯ ಲಕ್ಷಣಂ.

ನಿಯತೋದ್ದೇಶಿಯುಮನುದೇ |
ಶಿಯುಮನನು(ವಿನಂ)ತು ಪೇಱ್ದೆ ಯಾಥಾಸಂಖ್ಯಾ ||
ಹ್ವಯಮಕ್ಕುಮಾಗವೋಕ್ತ್ಯ |
ಶ್ರಯದಿಂ ವ್ಯತಿರೇಕಮಕ್ಕುಮಲ್ಲದುವೆಲ್ಲಂ || ೭೬||

ಚ್ಯುತಯಾಥಾಸಂಖ್ಯ ದೋಷಲಕ್ಷಣಂ.

ಚ್ಯುತಯಾಥಾ ಸಂಖ್ಯಾ(ರ್ಥಂ) |
ಪ್ರತೀತದೋಷಾನುವಸಥಮೆಂದಱಿಗೆ ಬುಧರ್ ||
ಸತತಮುದಱಿಯೆ ನಿದರ್ಶನ |
ಗತಮಿಂತಕ್ಕುಂ ಪ್ರಮೋದದಿಂ ಕವಿಜನದೊಳ್ || ೭೭||

ಚ್ಯುತಯಾಥಾಸಂಖ್ಯಲಕ್ಷ್ಯಂ.

ಅಳಿನಳಿನೋತ್ಪಳರುಚಿಗಳ |
ನಳಕಾನನನಯನಯುಗಳದಿಂ ಗೆಲ್ದಿರ್ದುಂ ||
ಕೊಳದೊಳಗೆ(ನಂ) ನೋಱ್ಪಿಗ |
ವಿಳಾಸಿನೀ ನಿನ್ನ ಪೋಲದೇನತಿಶಯಮೋ || ೭೮||

ಯಾಥಾಸಂಖ್ಯಲಕ್ಷ್ಯಂ.

ಅಳಕಾನನನಯನಂಗಳೊ |
ಳಳಿನಳಿನೋತ್ಪಳವಿಲಾಸಮುಂ ಗೆಲ್ದುದಱಿಂ ||
ತಿಳಿಗೊಳನಂ ಪೋಲ್ತಿರ್ದುಂ |
ತಿಳಿಯದಿದೇನೆಂಬುದುಂ ತದನ್ವಯಮದಱಿಂ ||* ೭೯||

* ಈ ಲಕ್ಷ್ಯಪದ್ಯಗಳು ಲಕ್ಷಣದಲ್ಲಿ ಹೇಳಿರುವ ಕ್ರಮದಲ್ಲಿಲ್ಲದೆ ಹಿಂದುಮುಂದಾಗಿವೆ—ಅಳಕಾನನ—ಎಂಬ ಕಂದದ ಮುಂದೆ ಅಳಿನಳಿನೋತ್ಪಳ—ಎಂಬ ಕಂದವಿರಬೇಕು.

### (೬) ವ್ಯವಹಿತ ದೋಷಲಕ್ಷಣಂ.

ಕಂ|| ಸವಿಶೇಷಾಲಂಕಾರೋ |
ದ್ಭವಮಾಗಿರುವೊಂದುವರ್ಥದೊಳ್ ಸಂಬಂಧ ||
ವ್ಯವಧಾನಮಾದೊಡಕ್ಕುಂ |
ವ್ಯವಹಿತದೋಷಂ ಪ್ರಯೋಗಪಟುತೇಜನದಜಾ || ೧೦||

ಲಕ್ಷ್ಯಂ.

ಮನದೆ ನೆನೆವವರ ಕಿಡುಗುಂ |
ಜಿನಾಧಿಪಾ ನಿನ್ನ ಪಾಪನಿಚಯಮಂ ಗುಣಮಂ ||
ಮುನಿಗಳುಮುದಱಿಂ ತನ್ನೇ |
ವನೆಯ್ದಿಂ ಕಿಡಿಸಲ್ಕೆ ಪತ್ತಿದರ್ ಸಂ (ಸ್ಕೃ)ತಿಯಂ || ೧೧||

### (೭) ಛಂದೋಭಂಗಲಕ್ಷಣಂ.

ಗುರುಲಘುವಿನ್ಯಾಸಕ್ರಮ |
ನಿರಚನೆಯನ್ಯೂನಾತಿರಿಕ್ತಮಾದೊಡೆ ಕೃತಿಯೊಳ್ ||
ನಿರುತಂ ಛಂದೋಭಂಗಂ|
ದುರುಕ್ತತರದೋಷಮುದಱು ಪಾಂಗಿಂತಕ್ಕುಂ || ೧೨||

ಮೊದಲ ಪ(ದಂ)ನ್ಯೂನಾಕ್ಷರ |
ಮದಱಿಂದೆ ಒಱೆಕ್ಕಮರ್ಥಮಧಿಕಾಕ್ಷರವಿಂ ||
ತಿದಱಿಂ ಛಂದೋಭಂಗಂ |
ಪದನಱಿದದನಿಂತು ಸಮಾಜ್ಞ ಪೇೞ್ವೊಡೆ ಚೆಲ್ವಂ || ೧೩||

ಲಕ್ಷ್ಯಂ.

ವನರುಹದಳನಯನೆ ನಿ |
ನ್ನನಿ ನಿನೆ ನೆನೆ ನನ[ನಿನಳಗೆ]ಜಗದರ ಕಡೆ ಗಣ್ಗಳ್ ||
ಮುನಿಸನಭಿನಯಿಪ ವ್ರೋಲ್ ಕೆ |
ಮ್ಮನೆ ದಕ್ಷ್ಯಂಭೋಜರಾಜಿಯ ನೇಱ್ಕಳಿಗೊಳ್ಗಂ || ೧೪||

(ಅ) ವಿಸಂಧಿದೋಷಲಕ್ಷಣಂ.

ಛಂದಕ್ಕೆ ಬಾರದೆಂದಱಿ ।
ದೊಂದೊಂದಱಿತೊಳೊಂದಿ ಬಂದು ನಿಂದಕ್ಕರಮಂ ॥
ಸಂಧಿಸದೆ ಪೇೞ್ದೊಡವು ಕೃತಿ ।
ನಿಂದಿತಮೆಂದುಂ ವಿಸಂಧಿ ಯೆಂಬುದು ದೋಷಂ ॥ ೯೫॥

(ಕ) ಲಕ್ಷ್ಯಂ.

೩೦॥ ಜನಪತಿಗೆ(ಕೊ)ಸಗೆಯಂ ಪುರ ।
ಜನಮೆಲ್ಲಂ ಬೀಱುತಿರ್ಪರಾಗಳ್ ತಾಮುಂ ॥
ಮನದುತ್ಸವದಿಂ ಕುಣಿವಂ ।
ತನಿಲಾಹತ [ಕೇತ] ನಾಳಿ ಸೊಗಯಿ (ಸುತಿರ್ಕುಂ) ॥ ೯೬॥

ಮುನ್ನಂ ಪೇೞ್ದಿರ್ದರ್ಥಂ ।
ಭಿನ್ನಪ್ರಸ್ತಾರಭಿತ್ತಿದೋಷಾನುಗತಂ ॥
ಸನ್ನುತಮಪರಾರ್ಥಂ ಸಂ ।
ಪನ್ನಂ ಶ್ಲಿಷ್ಟಾಕ್ಷರೋಪರಚಿತಮದೋಷಂ ॥ ೯೭॥

(ವಿರೂಪಸಂಧಿ.)

ಸಂಧಿಗಳುಂ ಕೆಲವೆಡೆಯೊಳ್ ।
ಬಂದು ವಿರೂಪಂಗಳಾಗಿ ಸಮನಿಸಿ ಕವಿತಾ ॥
ಬಂಧನದೊಳಾಗೆ ದೋಷಾ ।
ಬಂಧುಗೆ ಶಶಲಕ್ಷ್ಮದಂತೆ ಕಱೆಯಂ ತರ್ಕ್ಕುಂ ॥ ೯೮॥

ಲಕ್ಷ್ಯಂ.

ಅರಮರಸಂ ಕೃತಕಾದ್ರಿಯೊ ।
ಳರಮರಮನೆಯೊಳಗೆ ಕಂದುಕ ಕ್ರೀಡೆಗಳೊಳ್ ॥
ಅರಮುದ್ಯಾನವನಂಗಳೊ ।
ಳರಮಂತಃಪುರದೊಳರಮದೆಂದುಂ ನಿಲ್ತಂ ॥ ೯೯॥

(ಕ) ಲಕ್ಷ್ಯಸಮನ್ವಯವಿಲ್ಲ.

ಉಪಸಂಹೃತಿ.

ದೋಷಂಗಳಿಂತು ಮಿಗೆ ಸಂ |
ಶ್ಲೇಷದೊಳಾದುಂದು ಸಕಲವಿದ್ವತ್ಸಭೆಯೊಳ್ ||
ದೂಷಿಸುಗುಂ ಕೃತಿವಧುವಂ |
ಭಾಷಾವಿದರದಱ ದೆಸೆಯನುಱಿಗೀ ತೆಱದಿಂ || ೧೦೦||

(೯) ನೇಯಾರ್ಥ ದೋಷಲಕ್ಷಣಂ.

ಕುಱಿತಂತೆ ಪೇಳ್ದ ಪದದೊಳ್ |
ನೆಱಿಯುದೊಡೆಲ್ಲಂ ವಿವಕ್ಷಿತಾರ್ಥಮಶೇಷಂ ||
ಪೆಱತೊಂದಲ್ಲಿಲ್ಲದುಮುಮ |
ನಱಿವವರಿಟ್ಟಱಿಯ ಪೇಱಿವ್ದಡದು **ನೇಯಾರ್ಥಂ** || ೧೦೧||

ಲಕ್ಷ್ಯಂ.

ಕಂ|| ಪರೆದಿರೆ ರಾಗಂ ತನ್ನೊಳ್ |
ನಿರಂತರಂ ಗಗನವಿವರವೊಪ್ಪಿತ್ತಾದಂ ||
ವರಪಾರಿಜಾತಕುಸುಮೋ |
ತ್ಕರಸಾಂದ್ರಪರಾಗವಿಸರಪಿಂಜರಿತಂಬೋಲ್ || ೧೦೨||

ನೇಯಾಭಾವಕ್ಕೆ ಲಕ್ಷ್ಯಂ.

ಪರೆದಿರೆ ಸಂಧ್ಯಾರಾಗಂ |
ನಿರಂತರಂ ಗಗನವಿವರವೊಪ್ಪಿತ್ತೆಂಬಾ ||
ದರದಿಂ ಪೇಱಲ್ ಬಗೆದಂ |
ತಿರೆ ಸಂಧ್ಯಾಪದಮನಿಡದೆ ಪೇಳ್ವುದು ದೋಷಂ || ೧೦೩||

* (೧೦) (ಕ) ಆಗಮವಿರುದ್ಧ ದೋಷಲಕ್ಷಣಂ.

ರಾಗಾದಿದೋಷವಿರಹಿತ |
ವಾಗತಿಶಯವಖಿಳವಸ್ತು (ವಿಸ್ತರ) ವಿಷಯಂ ||
ಯೋಗಿಗುಣಾನುಗತಂ ಮ |
ತ್ತಾಗಮ ವೇತದ್ವಿರುದ್ಧ ವಚನಂ ದೋಷಂ || ೧೦೪||

* ಈ ಆಗಮಾದಿವಿರುದ್ಧಕ್ಕೆ ಲಕ್ಷ್ಯಗಳು ಇಲ್ಲಿ ಉಕ್ತವಾಗಿಲ್ಲ, ದಂಡಿ ಮತ್ತು ಭಾಮಹ ಇವರ ಗ್ರಂಥಗಳಲ್ಲಿ ಉಕ್ತವಾಗಿವೆ. ಅಲ್ಲದೆ ಇಲ್ಲಿ ಹೇಳಿರುವ ಕಾರಕಾದಿದೋಷಗಳ ಲಕ್ಷ್ಯಲಕ್ಷಣಗಳು ಅವರ ಗ್ರಂಥಗಳಲ್ಲಿಲ್ಲ.

ಕಾರಕಂಗಳ್ಗೆ ಲಕ್ಷ್ಯಂ.

ಚಂ|| ನರಪತಿ ಬಂದನಾ ನೃಪನನಲ್ತಿಯೆ ಕಾಣ್ಬುದು ತನ್ನರೇಂದ್ರನಿಂ |
ಧರಣಿ ಸನಾ(ಥೆ) ಭೂಪತಿಗೆ ಕಪ್ಪವ(ನೀಗ)ವನೀಶನತ್ತಣಿಂ ||
ಪರಿಭವಮಂ ಕಲಿಲ್ಗುವುದಧೀಶ್ವರನಾ ದಯೆ ಸಾಲ್ಗುಮಾಮಹೀ |
ಶ್ವರನೊಳಿದಪ್ಪುದೆಂಬುದಿದು ಕಾರಕಯುಕ್ತವಿಭಕ್ತ್ಯನುಕ್ರಮಂ || ೧೧೫||

ಕಾರಕದೋಷಂ.

ಚಂ|| ಬರಮೆಮುಗೀಗೆ ದೇವತೆಗಳಾದರದಿಂ ಕರುಣಿಪ್ಪುದಕ್ಕೆ ಬಂ |
ಧುರಗುಣಬಂಧುಸಂತತಿಯನೆಂಬುದು ಕಾರಕದೋಷಮಾಗಳುಂ ||
ಬರವನವೋಘುವಿೂಗೆಮುಗೆ ದೇವತೆಗಳ್ ಕರುಣಿಪ್ಪ(ದ)ಕ್ಕೆ ಬಂ |
ಧುರಗುಣಬಂಧುಸಂತತಿಗೆ ನಿಕ್ಕುವಮೆಂ(ಬು)ದದುಷ್ಟಕಾರಕಂ || ೧೧೬||

ಲಕ್ಷ್ಯಸಮನ್ವಯಂ.

ಉ|| ನಿಕ್ಕುವ ಮಿಂತುಮಲ್ಲದದ(ಱಾ) ಕ್ರಿಯೆ ಸಾರ್ದಿರೆ ಪತ್ತಿ ಮುಂದೆ ಸೈ |
ತಕ್ಕುಮನುಕ್ರಮಾನುಗತರಿಂ ಬರಮಿೂಗೆಮುಗೆಂಬ ಕಾರಕಂ ||
ಸಕ್ಕದವೇನೊ ಕಾರಕವಿಭಕ್ತಿಯೊಳೊಂದೆ ಸಮಾಸಯುಕ್ತಿ ಲೇ |
ಸಕ್ಕುಮಭೇದರೂಪಗುಣಮಾಗಿ ತಗುಳ್ದಿರೆ ಮೇಣ್ ಕ್ರಿಯಾಪದಂ|| ೧೧೭||

ವಚನ ದೋಷಾದೋಷ ಲಕ್ಷ್ಯಂಗಳ್.

ಬಂದುವು ಪಾವುಡಂ ನೃಪತಿಗೆಂಬುದುಮಾನೆಗಳೀಪ್ರದೇಶದೊಳ್ |
ನಿಂದುದಿದೆಂಬುದುಂ ವಚನದೋಷವಿಶೇಷಮನೈಪುಣೋಕ್ತಿಯಿಂ ||
ಬಂದುದು ಪಾವುಡಂ ನೃಪತಿಗೆಂಬುದು ಮಾನೆಗಳೀಪ್ರದೇಶದೊಳ್ !
ನಿಂದುವಿವೆಂಬುದುಂ ಬಗೆದು ನೋಡೆ ಗುಣಂ ವಚನಕ್ಕೆ ನಿಕ್ಕುವಂ|| ೧೧೮||

ವಚನ ದೋಷಾಪವಾದಂ.

ಜಾತಿವಿಭಾಗಮಂ ಬಗೆದು ಪೇೞೆ ಬಹುತ್ವಮನೇಕವಾಕ್ಯಸಂ |
ಜಾತಗುಣಂ ತದೇಕವಚನಂಗಳೊಳಂ ದೊರೆವೆತ್ತು ಕೂಡುಗುಂ ||
ಮಾತಿನೊಳೇನೊ ಸಂಖ್ಯೆಗಳೊಳೇಕಬಹುತ್ವವಿಪರ್ಯಯಕ್ಕಸಂ |
ಖ್ಯಾತಗುಣಂ ವಿಕಲ್ಪಮದು ಕನ್ನಡದೊಳ್ ಗುಣಮಂ ತಗುಳ್ಚುಗುಂ ||

ಲಕ್ಷ್ಯಂ.

ಚಂ|| ಕುದುರೆ ತಗುಳ್ದುವಾದೆಸೆಯ ಬಿಲ್ಲವರಂ ಸುಱಿದಾನೆ ಮೆ |
ಟ್ಟಿದುವೆಲೆನೋಡಿಮೆಂಬುದಿದು ಜಾತಿಕೃತೈಕಬಹುತ್ವಮೊಂದುಗುಂ ||
ಕುದಿಕುದಿದತ್ತಣಿಂ ಕುದುರೆ ನೂಱುಱುಳಾ ಬಲಬಾನೆ ಪತ್ತುತಾ |
ಗಿದುವೆನೆ ದೋಷಮಾ ಕಿರಿದುಸಂಖ್ಯೆಯೊಳೇಕಬಹುತ್ವಸಂಗದಿಂ || ೧೨೦||

ಬೆರಸಿರೆ ಮುಂ ಸಮುಚ್ಚಯಪದಪ್ರತತೋಕ್ತಿ(ವಿಭಕ್ತಿ)ಕೂಡೆ ಬಂ |
ದಿರದೆಯುಮೇಕ ವಾಕ್ಯದೊಳೆ ಕಾರಕಸಂಪದಮುಂ ತಗುಳ್ದುಗುಂ ||
ನರಪತಿಯುಂ ನೃಪಾಂಗನೆಯುಮುಂ ನೆರೆದೞ್ತಿಯಿನಾಡಿ ಪೋದರಾ |
ಪರಿಜನಮುಂ ಮಹೋತ್ಸವದೊಳೊಂದಿದುದೆಂಬುದಿದಲ್ಪದೂಷಿತಂ|| ೧೨೧||

ಗಣಿದದೊಳೊಂದು ಬರ್ಪ ಪದಮೊಂದೆಡೆಗೊಂಡು ವಿಶೇಷ್ಯಮುಂ ವಿಶೇ |
ಷಣಮುಮನೊಂದಲೀಯದಿರೆಯುಂ ಮಿಗೆ ಕಾರಕದೋಷಕಲ್ತದಂ ||
ಪ್ರಣುತಪದಾತರೀಕರಣಮಂತದೆ ತಾಣದೊಳಾದೊಡಂ ಮಹಾ |
ಗುಣಮನೆ ತರ್ಕಮೇಕಬಹುಭೇದವಿಕಲ್ಪಮನಲ್ಲಿ ನೋಡಲಿಂ || ೧೨೨||

ಗುಣಯುತನಪ್ಪನಂ ಸುಭಟನಪ್ಪನನಾಯುಧಯುಕ್ತನಪ್ಪನಂ |
ಪ್ರಣುತಸಮಸ್ತವೈರಿಗಣನಪ್ಪನನುಜ್ವಲಕೀರ್ತಿಯಪ್ಪನಂ ||
ಗಣಿದಮನೇನುಮಂ ಬಗೆಯದಾಗಳುಮಂತೆ ಪರೋಪಕಾರಕಾ |
ರಣಪರನಪ್ಪನಂ ಮನದೆ ಮೆಚ್ಚ ಪರಾಭಿಮಾನಿಯಪ್ಪನಂ || ೧೨೩||

ನೆಗೆದ ಮುಗಿಲ್ಗಳುಂ ಸುರಿವ ಪೆರ್ಮೞೆಯುಂ ಮಿಗೆ ನುಣ್ಣನಪ್ಪ ಕೇ |
ಕಿಗಳ ಸರಂಗಳುಂ ಪೊಳೆವ ಮಿಂಚುಗಳುಂ ಕರಮುಚ್ಚಮಪ್ಪ ಬೆ ||
ಟ್ಟುಗಳ ತಟಂಗಳಿಂ ಸುರಿವ ನಿರ್ಝರಮುಂ ಪ್ರಾಸಕಾರೊಳಂತು ಬೆ |
ಳ್ವಗೆ ಪಥಿಕಾಂಗನಾಜನಮನಂಜಿಸುವಂತಿರೆ ತೋಱಿ ಸುತ್ತಲುಂ || ೧೨೪||

ಉಪಸಂಹೃತಿ.

* ಗೀತಿಕೆ|| ಇಂತುಕಾರಕಂಗಳೊ |
ಳ್ಸಂತವುಮಱಿಯೆ ಪೇೞ್ದಿಗುಣಮುಂ ದೋಷಮುಮಂ ||
ಚಿಂತಿಸಿ ಪೇೞ್ವುವಿನ್ನಪ್ಪುವಂ |
ಭ್ರಾಂತಿಲ್ಲದಱಿದು ಕೊಳ್ಗೆ ಕವಿಗಳ್ ಕೃತಿಗಳೊಳ್ || ೧೨೫||

(ಗುರುಲಘು ದೋಷಂಗಳ್.)

ಮಣಿಭೂಷಣವೃತ್ತಂ|| ಆರುಮಿೂಗುರುಲಘೂದಿತದೋಷವಿಶೇಷಮಂ |
ಧೀರಸತ್ವರಱಿದುಂ ಕುಱಿಗೊಂಡು ವಿಭಾಗಿಸಲ್ಕೆ ||
ಕಾರಣಾಂತರಮನಂತದಱೊಳ್ ತಱಿಸಂದು ಸಿ |
ಧಾರ್ರಿತಕ್ರಮದೆ ಪೇೞ್ವೆನುದಾಹರಣಂಗಳಂ || ೧೨೬||

ಗುರುದೋಷಲಕ್ಷಣಂ.

ಮಣಿಭೂಷಣವೃತ್ತಂ|| ಆಗಳುಂ ಗುರುಗಳಲ್ಲಿದ ತಾಣದೊಳಂ ಗು(ರೂ) |
ದ್ಯೋಗದಿಂ ಬಗೆಗೆ ಗೌರವದೋಷವಿದೆಂಬುದಂ ||
ಬೇಗಮಾಲಘುಗಳಲ್ಲದ ತಾಣದೊಳಂ ಲಘೂ|
ಪಾಗಮಕ್ರಮದೆ ನಂಬುಗೆ ಲಾಘವದೋಷಮಂ|| ೧೨೭||

ಲಕ್ಷ್ಯಂ.

ಸಾದುಗೆತ್ತು ಬಗೆಯ್ದಾದವನಾನೊಡನಟ್ಟಿಪೆ |
ನಾದಮಾನುಮಱಿವಾಸಿಸನಾಗದೆ ಮಾಳದೊಳ್ ||
ವೋದದಿಂನುಡುವ ಸೀರೆಗಮುನ್ನನದಿರ್ಪಿಬಾ(ರದೆ |)
ಪ್ರೋದೆ(ನಾಯ)ಡೆಯೊಳ(ಂ) ತಡೆದಾನವನಂದಮುಂ || ೧೨೮||

ಉಪಸಂಹೃತಿಯುಂ, ಲಘುದೋಷಮುಂ.

ಇಂತು ಪೇೞ್ದೊಡಿದು ಗೌರವದೋಷದ ಮಾೞ್ಕೆ ನಿ |
ಶ್ಚಿಂತವಿೂತೆಱದಪಂ ಕಳೆಗಾಕೃತಿಯತ್ತಣಿಂ ||
ಮುಂತೆ ಪೇೞ್ವ ಕುಱಿಪಂ ಕುಱಿಗೊಂಡು ಕವೀಶರಾ |
ರ್ಪಂತು ಪಿಂಗಿಸುಗೆ ಕಾವ್ಯದಿನಾ ಲಘುವೋಷಮುಂ || ೧೨೯||

* ಛಂದೋಭಂಗವುಂಟು

ಲಕ್ಷ್ಯಂ.

* ವೃ|| ನೆರೆದು ಬಂದಪರವರ್ ಸಯಲ್ಬಲಮೆಲ್ಲಮಂ |
ಬ್ಬಿರದೆ ಕೊಂದಪನಿವಂ ಬಿರುಸೇಗಳ ನಿಕ್ಕುವಂ ||
ಪರಿದು ಪೋಲ್ವಪ್ಪುಲಿವಂಬರ ಪಾಡಳಿವಂದಮುಂ |
ತಿರದೆ ಕೊಡ್ಡುಬರಿಯುದಂತಿರೆ ನಮ್ಮವರೆಲ್ಲರಂ ||

ಮಣಿಭೂಷಣವೃತ್ತಂ|| ಬೇಱಬೇಱ ವಿಕಲ್ಪಸಮುಚ್ಚಯಯುಗ್ಮದೊಳ್ |
ತೋಱುವೆಂ ಕ್ರಮವಿಕಲ್ಪನೆಯುಂ ಗುಣದೋಷಮುಂ ||
ಕೇಱಿಕೊಂಡು ಗುಣಮಂ ಕಳೆಗಲ್ಲಿಯ ದೋಷಮುಂ |
ತೋಱಿ ಪಿಂಗಿಸುವಪ್ಪೊಲ್ ಪ್ರಸನ್ನೆರೆ ಪ್ರೋಲ್ಲಿಗಳಂ ||

ಸಮುಚ್ಚಯದೋಷಲಕ್ಷಣಂ.

ದೇವರುಂ ಗೊರವರುಂ ಗುಣವೃದ್ಧರನಾರತಂ |
ಕಾವರಕ್ಕರಸನಂ ಪ್ರಜೆಯುಂ ಪರಿವಾರಮುಂ ||
ಏವಮುಂ ಬಗೆಯದಂತಿರೆ ಪೇಳ್ವ **ಸಮುಚ್ಚಯದೋ** |
**ದ್ಭಾವಕಕ್ರಮ**ವಿಚಾರದೆ ದೋಷಮಿದಗ್ಗಳಂ || ೧೩೨ ||

ಲಕ್ಷ್ಯಂ.

ನೃಪನುಮಂ ಪ್ರಜೆಯುಮಂ ಪರಿವಾರಮುಮಂ ಮಹಾ |
ಕೃಪೆಯಿನಾ ಗೊರವರುಂ ಸುರರುಂ ಗುಣವೃದ್ಧರುಂ ||
ವಿಪುಳರಾಗಪರರಾಗಿಸುಗೆಂದು **ಸಮುಚ್ಚಯ** |
ಕ್ಕುಪಚಿತೋನ್ನಗುಣಮಂ ಬಗೆ ಪೇಳ್ಗೆ ಕವೀಶ್ವರರ್ || ೧೩೩ ||

ಮಣಿಭೂಷಣವೃತ್ತಂ|| ಬೇಱಬೇಱ ನಿಲೆ ಕಾರಕದೊಳ್ ಕ್ರಿಯೆ ತಳ್ತುಮುಂ
ತೋಱಿ ಪೇಳ್ವವಗುಣಂ ಗುಣರೂಪದೆ ಪೊರ್ದುಗುಂ ||
ಸಾಱುಗಾಸೆಯುವರೆಲ್ಲರುಮಂ ನೃಪತಾನೆ ಮ |
ತ್ತೇಱುನಿಂ ಪಣೆಪೊಡಾಸೆಯನೆಂಬುದು ದೂಷಿತಂ || ೧೩೪ ||

* ಈ ವೃತ್ತದ ಹೆಸರು ಯಾವ ಛಂದಶ್ಶಾಸ್ತ್ರದಲ್ಲಿಯೂ ಉಕ್ತವಾಗಿಲ್ಲ.

* ವೃ|| ಒಸೆಗೆ ಮೇಣ್ ಮುನಿಗೆ ಪೋಣವರೆಲ್ಲರುಮಂತೆ ಬ |
ಗ್ಗಿ(ಸುಗೆ) ಮತ್ತುಱಿಯಲಾಗದು ನೆಟ್ಟನೆ ಪೂಣ್ಬುದಂ ||
ಪುಸಿವರಾಗಿರೆ ಮಾನಸರೆಂಬುದ ನಿಂತೆ ಶಂ |
ಕಿಸದೆ ನಂಬುವುದು ಮಿಕ್ಕ ವಿಕಲ್ಪದೋಷಮಂ || ೧೩೫||

* ವೃ|| ಪಱಿಗೆ ಮೇಣ್ ಪೊಗಱ್ಗೆ ಮೇಣ್ ನೆವಮಿಲ್ಲದೊಡಿಂತು ಕೈ |
ಗಱಿಯೆ ಬಗ್ಗಿಸುಗೆ ಮೇಣವರೆಲ್ಲರುಮಂತು ಮಾ ||
ನುಱಿವೆನಲ್ಲೆನೆಸಿತಃದೊ(ಡ)ಮೆಂಬುದು ಚೆಲ್ವ ಪಾಂ |
ಗಱಿಯುದಿಂತಿ(ಳಿ)ದನಿಂತಿರೆ ಪೇೞ್ಗೆ ವಿಕಲ್ಪಮಂ || ೧೩೬||

ಉಪಸಂಹೃತಿ.

ಗೀತಿಕೆ|| ಕುಱಿತು ಸಮುಚ್ಚಯದಾ ಬೞಿ ವಿಕಲ್ಪದಾ |
ತೆಱದೊಳೆ ದೋಷಮುಮನಂತೆ ಗುಣಮುಮಂ ||
ಕಿಱಿದಱಿರೊಳ್ ನೆಱೆಯೆ ಪೇೞ್ದನಿಂತೆ ಪೆಱವುಮ ನೀ|
ಕುಱಿಪನೆ ಕುಱಿ ಮಾಡಿ ಪೇೞ್ಗೆ ಕಬ್ಬಮಂ || ೧೩೭||

ಅವಧಾರಣ ವಿಶಂಕಾಲಕ್ಷಣಂ.

ದ್ರುತವಿಳಂಬಿತಂ|| ನಿಯಮಿತಾನ್ವಯ ಜಾತಿಗುಣಕ್ರಿಯಾ |
ಶ್ರಯಮಿದಾ(ಯ್ದ)ವಧಾರಣ ಲಕ್ಷಣಂ ||
ನಯನಿಯೋಗವಿಕಲ್ಪನೆಯೊಳ್ ವಿಶಂ |
ಕೆ(ಯೆ) ವಿಶೇಷಗುಣಕ್ಕುಪಲಕ್ಷಣಂ || ೧೩೮||

ಅವಧಾರಣ ದೋಷಲಕ್ಷ್ಯಂ.

ಕುಲಜನೀತನೆ ಪಂಡಿತ ನೀತನು |
ಜ್ಜ್ವಳ ಯಶೋಧಿಕನೀತನೆ ತಿಬ್ಬಮಂ ||
ದಲಸಿ ಪೇೞ್ವವಧಾರಣ ದೋಷಮಂ |
ನೆಲ (ಸ) ಲೀಯು[illegible]ದಿಂ ಕೃತಿನಾರಿಯೊಳ್ || ೧೩೯||

---

* ಈ ವೃತ್ತಗಳ ಹೆಸರು ಸಂಸ್ಕೃತ ಪ್ರಾಕೃತ ಕರ್ಣಾಟಕ ಛಂದೋ ಗ್ರಂಥಗಳಲ್ಲಿ ಉಕ್ತವಾಗಿಲ್ಲ. (ವೃತ್ತರತ್ನಾಕರ. ಪ್ರಾಕೃತ ಪಿಂಗಳ ಛಂದಸ್ಸೂತ್ರ. ಕರ್ಣಾಟಕ ಛಂದೋಂಬುಧಿ.)

ಗುಣಕ್ಕೆ ಲಕ್ಷ್ಯಂ.

* ವೃ॥ ಶೂರನೀತನೆ ಪಂಡಿತನೀತನೇ।
ಕ್ಷೀರಗೌರಯಶೋಧಿಕನೀತನೇ ॥
ಧಾರಿಣೀತಳದೊಳ್ ಧ್ರುವಮೆಂಬುದಾ।
ಧಾರವಿಂತವಧಾರಣದೊಳ್ ಗುಣಂ ॥ ೧೪೦॥

ವಿಶಂಕಾದೋಷಕ್ಕೆ ಲಕ್ಷ್ಯಂ.

ದ್ರುತವಿಳಂಬಿತ.॥ ವಿಬುಧನೋ ಫಣಿನಾಯಕನೋ ಮನೋ।
ಭವನಿವಂ ಕರವೊಪ್ಪಿದನೆಂಬುದಂ ॥
ಕವಿಗಳಿಟ್ಟ ವಿಶಂಕೆಯ ಪಾಟಿಯಂ।
ತವಿಸಿ ನಿಲ್ಕೆ ಮನೋಹರ ಕಾವ್ಯದೊಳ್ ॥ ೧೪೧॥

ಗುಣಕ್ಕೆ ಲಕ್ಷ್ಯಂ.

ದ್ರುತ॥ ಸುರಗಣಾಧಿಪನೋ ಫಣಿನಾಥನೋ।
ನಿರುತಮಾಸ್ಮರನೋ ಸೊಗಯಿಪ್ಪರೀ ॥
ದೊರೆಯರಿಲ್ಲ ನರರ್ ಪೆಱರೆಂಬುದಾ।
ವರರಚನಕ್ಕೆ ಗುಣೋದಯಕಾರಣಂ ॥ ೧೪೨॥

ಅಭ್ಯುಪ(ಗ)ಮೋಕ್ತಿ ಗುಣಾವಗುಣಂ.

ವ॥ ಅಪರಿ[illegible]ಯಮೆ ದೋಷಗುಣೌಘುವಿಂ।
ತುಪಚಿತಕ್ರಮದಾರಯ ಕಾವ್ಯದೊಳ್ ॥
ವಿಪುಳವೃತ್ತಿಯೊಳೊಂದಿರೆ ಪೇೞ್ವ ನ।
ಭ್ಯುಪಗಮೋಕ್ತಿ ಗುಣಾವಗುಣಂಗಳಂ ॥ ೧೪೩॥

ಪೊಳೆವ ಮಿಂಚುಗಳಂತಿರೆ ಕೇತುಗಳ್।
ಜಳದ ವೃಂದದವೋಲಿರೆ ಹಸ್ತಿಗಳ್ ॥
ಗಳಿತಧಾರೆಗಳಂತಿರೆ ಪತ್ತಿಗಳ್।
ಬಳಸಿ ಕಾರ್ಗೆ(ಣೆ)ಯಾಯ್ತು ಮಹಾಹವಂ ॥ ೧೪೪॥

* ಈ ವೃತ್ತದ ಹೆಸರು ಯಾವ ಛಂದಶ್ಶಾಸ್ತ್ರದಲ್ಲಿಯೂ ಉಕ್ತವಾಗಿಲ್ಲ.

ನಿಯಮಿತಾಕ್ಷರದಿಂದುಪಮಾಪ್ರತಿ ।
ಜ್ಞಯನೆ ತಿರ್ದುವುದಱ್ತಿಯಿಸಿರ್ದುಮಾ ॥
ಬಯಕೆ ತೀರದ ಕಾರಣದಿಂ ಭಿಪ ।
* ರ್ಯಯ ಮಿದಭ್ಯುಪ(ಗ)ವೋಕ್ತ್ಯುಪದೂಷಣಂ ॥ ೧೪೫॥

ಉಪಮಿತಾಕ್ಷರಮೆಲ್ಲಿಯು ಮೇಕರೂ ।
ಪಪರಿವೃತ್ತಿಯೊಳೊಂದಿದ ಮಾಱ್ಕೆಯಿಂ ॥
ದುಪಚಿತಕ್ರಮುಮಕ್ಕುಮಿದೆಂದುಮ ।
(1) ಭ್ಯುಪಗಮಕ್ಕೆ ಗುಣೋದಯಕಾರಣಂ ॥ ೧೪೬॥

ಸಮುಚಿತ ನೃಪತುಂಗದೇವಮಾರ್ಗ ।
ಕ್ರಮ(ನ)ಮುಮನಭೀಮುಖರ್ಕಳಪ್ಪರ್ ॥
ಕ್ರಮಸಹಿತಮಗಮ್ಯರೂಪಕಾವ್ಯ ।
ಶ್ರಮಪದಮಂ ಸಿರಪಾಯಕೆಯ್ದಲಾರ್ಪರ್ ॥ ೧೪೭॥

ಪರಿಚ್ಛೇದದ ಉಪಸಂಹೃತಿ.

ಅತಿಶಯಧವಳೋರ್ವೀಪೋದಿತಾಳಂ ॥
† ಕೃತಿ ಮತಿನಿ(ೀತಿ)ನಿರಂತರಪ್ರತೀತಂ ॥
ಶ್ರುತಯುವತಿಕೃತೋಪಚಾರಸಾರ ।
(2) ಸ್ವತಗುಣಗಣದಿಂದೆ ಕೃತ್ಯಮುಕ್ಕುಂ ॥ ೧೪೮॥

ಚಂ॥ ನುಡಿಗಳೊಡಂಬಡಲ್ಬಗೆ(ದ)ವೋಲ್ ಬಗೆಯುಂ ಮಿಗಲೀಯದೊಂದೆ ನಾ
ಣ್ನುಡಿಯ ಬೆಡಂಗೆ ಕನ್ನಡದ ಮಾತಿನೊಳಾ ವಿಕಟಾಕ್ಷರಂಗಳೊಳ್ ॥
ತೊಡರದೆ ಸಕ್ಕದಂಗಳ ಪದಂ ಪವಣಾಗಿರೆ ಮೆಲ್ಪುವೆತ್ತು ದಾಂ ।
ಗುಡಿವಿಡಿಪಂತೆ ನೀಳ್ದಿಸಿತುವೇಱ್ಪುದು ನೀತಿನಿರಂತರಕ್ರಮಂ॥ ೧೪೯॥

* ಈ ಪಾದದಲ್ಲಿ ಗ ಎಂಬಕ್ಷರವು ಛಂದಸ್ಸಿಗೆ ಹೆಚ್ಚುವುದರಿಂದ ಅಭ್ಯುಪವೋಕ್ತಿ ಎಂಬ ಶಬ್ದವಿರಬೇಕಾಗುವುದು. ಇಲ್ಲಿ ಹೇಳುವ ವಿಷಯವು ಉಪಮೆಗೆ ಸೇರಿದುದು. ಆದುದರಿಂದ ಅಭ್ಯುಪವೋಕ್ತಿ ಎಂಬ ಶಬ್ದವೇ ಇಲ್ಲಿರಬೇಕೆಂದು ತೋರುವುದು. ಹೀಗೆಯೇ ೧೪೩ ನೆಯ ಪದ್ಯದಲ್ಲಿಯೂ ಇರುವ ಈ ಶಬ್ದವನ್ನು ಅರ್ಥಾನುಗುಣವಾಗಿ - ಅಭ್ಯುಪಗವೋಕ್ತಿ = ಅಭ್ಯುಪಮಿತೋಕ್ತಿ ಎಂದು ತಿದ್ದಿಕೊಳ್ಳಬಹುದು.

(1) ಅಭ್ಯುಪಮಿತಿಕ್ಕೆ (2) ಗುಣಕೃತಕೃತ್ಯಮಲ್ಲನಕ್ಕುಂ ಎಂದಿರಬಹುದು.

† ಈ ಪಾದದಲ್ಲಿ ಛಂದೋಭಂಗವುಂಟು. ಆವರಣದಲ್ಲಿರುವ ಅಕ್ಷರವು ಹೆಚ್ಚಾಗಿರುವುದು.

ಮ॥ ಸಕಳಾಳಾಪಕಳಾಕಳಾಪಕಥಿತವ್ಯಾವೃತ್ತಿಯೊಳ್ ಕೂಡಿ ಚಿ।
ತ್ರಕರಂಬೋಲ್ ಪರಭಾಗಭಾವವಿಲಸದ್ವರ್ಣಕ್ರಮಾವೃತ್ತಿಯುಂ ॥
ಪ್ರಕಟಂ ಮಾಡಿರೆ ಪೇೞ್ದು ಚಿತ್ರಕೃತಿಯುಂ ವ್ಯಾವರ್ಣಿಸುತ್ತುಂ ಕವಿ।
ಪ್ರಕರಂ ಶ್ರೀವಿಜಯಪ್ರಭೂತಮನಿದಂ ಕೆಯ್ಕೊಳ್ವುದೀಮಾೞ್ಕೆಯಿಂ॥೧೫೦॥

## ಗದ್ಯ

ಇದು

ಶ್ರೀ ಪರಮ ಶ್ರೀ ನೃಪತುಂಗ ದೇವಾನುಮತ

ಮಪ್ಪ

**ಕ ವಿ ರಾ ಜ ಮಾ ರ್ಗ ದೊ ಳ್ ॥**

ದೋಷಾದೋಷಾನುವರ್ಣನನಿರ್ಣಯಂ.

ಪ್ರಥಮ ಪರಿಚ್ಛೇದಂ ॥

ಶ್ರೀ

# ದ್ವಿತೀಯ ಪರಿಚ್ಛೇದಂ.

## ಶಬ್ದಾಲಂಕಾರ ಪ್ರಕರಣಂ.

---

### ಅಲಂಕಾರಲಕ್ಷಣಂ.

ಕಂ॥ ಪರಮಶ್ರೀಕೃತಿವಧುವಾ ।
ಶರೀರಶೋಭಾಕರಂಗಳಪ್ಪ ಗುಣಂಗಳ್ ॥
ನಿರತಿಶಯಾಲಂಕಾರ ।
ಪ್ರರೂಪಿತಂಗಳ್ ಪುರಾಣಕವಿವಿದಿತಂಗಳ್ ॥ ೧॥

### ಅಲಂಕಾರವಿಭೇದಂ.

ಸಾರಶ್ರೀನೃಪತುಂಗ ವಿ ।
ಚಾರಕ್ರಮಮಾರ್ಗಗಣನೆಯೊಳ್ ಪರಮಾಲಂ ॥
ಕಾರವಿಭಾಗಂ ವಿವಿಧಾ ।
ಕಾರಂ ಶಬ್ದಾರ್ಥಭೇದದಿಂದೆರಡಕ್ಕುಂ ॥ ೨॥

ಅನ್ನೆಗಮದಱೊಳಗೆ ಸಮು ।
ತ್ಪನ್ನಪ್ರಾಧಾನ್ಯಮನ್ಯ ಮರ್ಥಾಧಾರಂ ॥
ಮುನ್ನಂ ಶಬ್ದಾಲಂಕಾ ।
ರನ್ನಿಶ್ಚಿತಮಕ್ಕೆ ಪೇೞ್ವ ಮಾೞ್ಕೆಯೊಳೆನ್ನಾ ॥ ೩॥

### ಶಬ್ದಸಾರೂಪ್ಯಂ.

ಇಲ್ಲಿಗಿದುತಕ್ಕುದಿಲ್ಲಿಗೆ ।
ಪೊಲ್ಲದಿದೆಂದಱಿದು ಸಮಱಿ ಬಲ್ಲಂತೆಲ್ಲಂ ॥
ಸೊಲ್ಲುಂ ಪೊಸಸುಂ ಗ್ರುಡಿಡಂ ।
ತಲ್ಲಿದೆ ತಲ್ಲಣೆಸದಲಸದಿಡು ಮೃದುಪದಮಂ ॥

ಅರ್ಥಸಾರೂಪ್ಯಂ.

ಕಂ॥ ಗಱಿಯಿಸಿದರ್ಥಂ ಸಲೆ ಪಾಂ।
ಗೞಿಯುದೆಯುಂ ಶಬ್ದವೊಂದದಿದೆರ್ೊಡೆ ಮುತ್ತುಂ ||
ಮೆಱಿಸುಂ ಕೋದಂತಕ್ಕುಂ।
ಕಱಿಲ್ಚಿ ಕಳೆಗೊಂದಿ ಮುಂದೆ ಬಾರದ ಪದಮಂ ॥ ೫॥

ಲಘ್ವಕಾರಾಂತಪದ ಪ್ರಯೋಗನಿಯಮಂ.

ನಿಲಿಸಿ ಲಘುಪದಮನದನ।
ಗ್ಗಲಿಸಿರೆ ಮತ್ತೊತ್ತಿ ಬರ್ಪ ಪದಮಂ ತುದಿಯೊಳ್ ||
ನಿಲೆ ಪೇೞ್ದಾಗಳ್ ಕೂಸಿನ।
ತಲೆಯೊಳ್ ಬಿಣ್ಪೊಱೆಯ ನಿಟ್ಟವೋಲಸುಖಕರಂ ॥ ೬॥

ಅದಕ್ಕೆ ಲಕ್ಷ್ಯಂ.

*ಬರಿಸಿ ಕ್ಷಿತಿಪತಿಯಂ ಸ।
ಯ್ತಿರಿಸಿ ಪ್ರಿಯಕುಶಲವಾರ್ತೆಯಂ ಬೆಸಗೊಂಡು ||
ಸ್ಥಿರವಿರ್ದು ಪ್ರಭು ನುಡಿಯೆ।
ಪ್ರರೂಢಮುದನಾದನಾತನೆಂಬುದು ದೂಷ್ಯಂ ॥ ೭॥

ದೋಷಾಭಾವಲಕ್ಷ್ಯಂ

ಕ್ಷಿತಿಪತಿಯಂ ಬರಿಸಿ ಜಗ।
ನ್ನುತನಂ ಸಂತೈಸಿ ಕುಶಲವಾರ್ತಾಂತರಮಂ ||
ಮಿತವಚನಂ ಬೆಸಗೊಂಡತಿ।
ವಿತೀರ್ಣಮುದನಾದನಾತನೆಂಬುದು ಮಾರ್ಗಂ ॥ ೮॥

ಕ್ರಿಯಾವಿಶೇಷಣ ಪ್ರಯೋಗದೂಷ್ಯಪ್ರಕಾರಂ.

ಒಂದಂ ಕ್ರಿಯಾವಿಶೇಷಣ।
ಮಂ ದೊರೆಕೊಳೆ ಸೈತು ಪೇ(ೞ್ದುಮ)ದಱೊಳೆ ಪೆಱತಂ ||
ಸಂಧಿಸಿ ಪೇೞ್ವೊಡೆ ಕೃತಿಯೊಳೆ।
ಗೊಂದಿರದೆರಡಕ್ಕೆ ಬಿಟ್ಟ ಕಱುಪಂ ಪೋಲ್ಗುಂ ॥ ೯॥

* ಇದು ಶಬ್ದಮಣಿದರ್ಪಣದಲ್ಲಿ ಉದ್ಧೃತವಾಗಿದೆ.

ಲಕ್ಷ್ಯಂ.

ಕಂ|| ಪರಿವಾರವಾರವನಿತಾ |
ಪರಿವೃತನರಮನೆಯೊಳರಸನಂಬರತಳದೊಳ್ ||
ವರತಾರಾಪರಿಗತಶಶ |
ಧರನಂತೊಪ್ಪಿರೆ ವಿನೋದದಿಂದುರುಮುದದಿಂ || ೧೦||

ಕ್ರಿಯಾವಿಶೇಷಣ ಪ್ರಯೋಗಾಽದೂಷ್ಯಂ.

ಪದನಱಿದೊಂದಂ ಕ್ರಿಯೆಯೊಳ್ |
ಪುದಿದುೞಿದುದನೊಂದು ಬರೆ ವಿಶೇಷ್ಯದೊಳೊಂದಂ ||
ಸದಭಿಮತಮಾಗಿ ನಿಲೆ ಪೇ |
ೞ್ವುದು ಮಾರ್ಗಂ ನಿತ್ಯಮಲ್ಲವಲ್ಲಭಮತದಿಂ || ೧೧||

ಲಕ್ಷ್ಯಂ.

ಪರಿವಾರವಾರವನಿತಾ |
ಪರಿವೃತನರಮನೆಯೊಳರಸನಂಬರತಳದೊಳ್ ||
ವರತಾರಾಪರಿಗತಶಶ |
ಧರನಂತೊಪ್ಪಿರೆ ವಿನೋದದಿಂ ಜನಿತಮುದಂ || ೧೨||

ನಿರರ್ಥಕನಿಪಾತಾಽವ್ಯಯ ಪ್ರಯೋಗದೂಷ್ಯಂ.

ಇಂನಂತೆ ಮತ್ತೆ ಬೞಿ ಮಿಗೆ |
ಮುಂ ನಿಲೆ ತಾಂ ಮೇಣ್ ವೆಱಂ ಗಡಂ ಗಳಮಾದಂ ||
ಕೆಂನಂ ನಿಲ್ಲೆಂದಿವನೆಂ |
ದುಂ ನಿಱಿಸಲ್ಕಿಲ್ಲದೆಡೆಗಳೊಳ್ ಕಲ್ಲದಿರಿಂ || ೧೩||

ಲಕ್ಷ್ಯಂ.

ನೃಪಕನ್ಯಕಾಸ್ವಯಂವರ |
ವಿಪುಳಮಹೋತ್ಸವವಿವಾಹದೊಳ್ ಬಂದಿರ್ ಮು ||
ನ್ನಪವಾದವಾದುದೆನಗೇಂ |
ಚಪಲಪ್ಪಜನೋಕ್ತಿಯಿಂದಮಿಂ ಬಾರದಿರಿಂ || ೧೪||

ದ್ವಿತೀಯಾಷಷ್ಠೀವಿಭಕ್ತ್ಯಕಾರದೀರ್ಘವಿಚಾರಂ.

ಕಂ|| ಘನಮೆರಡನೆಯದಱಿೊಳಮಾ |
ಱನೆಯ ವಿಭಕ್ತಿಯೊಳವೊಳವು ಗುರುಲಘುಭೇದಂ ||
ಅನಿಯತವೃತ್ತಿಯನಱಿದದ |
ನನುಮಾರ್ಗಕ್ರಮದೆ ಸಯ್ತು ಮಾಡುಗೆ ನಿಪುಣರ್ || ೧೫||

ಸ್ವರಪರಕದ್ವಿತೀಯಾವಿಭಕ್ತ್ಯಕಾರದೀರ್ಘವಿಚಾರಂ.

ಆದಿಸ್ವರಪದಮಂತ್ಯದೊ |
ಳಾದೆಡೆಯೊಳ್ ದೀರ್ಘಮಕ್ಕುಮೆರಡನೆಯ ವಿಭ ||
ಕ್ತ್ಯಾದಾನಪದಂ ದೀರ್ಘಂ |
ಪಾದಾಂತದೊಳುೞಿದ ತಾಣದೊಳ್ ಸ್ವಚ್ಛಂದಂ || ೧೬||

ಪದಾಂತದ್ವಿತೀಯಾವಿಭಕ್ತ್ಯಕಾರದೀರ್ಘನಿಯಮಕ್ಕೆ ಲಕ್ಷ್ಯಂ.

ನೃಪನನಭಿಮಾನಧನನನ |
ನುಪಮನನತಿಶಯವಿಶಾಲಕೀರ್ತಿಧ್ವಜನಾ ||
ನು (ಪ) ಚಿತಗುಣನಾನುಚಿತನ |
ನಪೇತದೋಷನನುದಾರಚರಿತೋದಯನಂ || ೧೭||

ಉೞಿದೆಡೆಯ ಸ್ವಚ್ಛಂದಕ್ಕೆ ಲಕ್ಷ್ಯಂ.

ನೃಪನಾನಭಿನುತಮನನಾ |
ನುಪಮೇತರನಾ ನಪಾರಕೀರ್ತಿಧ್ವಜನಂ ||
ವಿಪುಲಗುಣಜ್ಞನನುಚಿತನ |
ನಪಗತದೋಷನನುದಾರಚರಿತೋದಯನಂ || ೧೮||

ಉಪಸಂಹೃತಿ.

ಎಂದಿಂತು ಪೇೞ್ದ ಮಾೞ್ಕೆಯೊ |
ಳೊಂದುವುದುಮನೊಂದು ಬಾರದುದುಮಂ ಪೀನಂ ||
ಸಂದೆಯಮಿಲ್ಲದೆ ಸಲೆ ತಱಿ |
ಸಂದೋಸಱಿಸುವುದು ಕಾವ್ಯರಚನಾಕ್ರಮದೊಳ್ || ೧೯||

ಷಷ್ಠೀವಿಭಕ್ತಿಯಕಾರದೀರ್ಘವಿಚಾರಂ.

ಕಂ|| ಪಲವುಮನೊಡಗೂಡಿರೆ ಸ್ತ್ರೈ।
ತಲಸದೆ ಪೇೞ್ವೆಡೆಯೊಳಂ ಸ್ವಸಾಬಾಂತದೊಳಂ ॥
ಪಲವಾಱನೆಯ ವಿಭಕ್ತಿಯೊ ।
ಳಲಘೂಚ್ಚಾರಣೆ ಯಥೇಷ್ಟಮುೞಿದೆಡೆಗಳೊಳಂ ॥ ೨೦॥

ಷಷ್ಠೀವಿಭಕ್ತ್ಯಕಾರದೀರ್ಘನಿಯಮಕ್ಕೆ ಲಕ್ಷ್ಯಂ.

ನೃಪನಾ ನೃಪನಂದನನಾ ।
ನೃಪವಧುವರ್ ನೆರೆದು ಸುಖದೊಳಿರೆ ಕೈಕೊಂಡ ॥
ತ್ರಪರಿಮಿತರಾಗಮೆರ್ದೆಯಂ ।
ನೃಪಬಾಂಧವರಾ ಸುಮಿತ್ರರಾ ಪರಿಜನ(ದಾ) ॥ ೨೧॥

ಉೞಿದೆಡೆಯ ಯಥೇಷ್ಟಕ್ಕೆ ಲಕ್ಷ್ಯಂ,

ನೃಪನ ನರಪಾಲತನಯನ ।
ನೃಪವಧುವರ್ ನೆರೆದು ಸುಖಿಸಿರೆ ಕೈಕೊಂಡ ॥
ತ್ರಪರಿಮಿತರಾಗವೆರ್ದೆಯಂ ।
ನೃಪತಿಸನಾಭಿಗಳ ಬಂಧುಜನದಾ ಕೆಳೆಯಾ ॥ ೨೨॥

ಸಂಬೋಧನಾ ದೀರ್ಘನಿಯಮಂ.

ಸಂಬೋಧನೆ ದೀರ್ಘೋಕ್ತಿಯೊ ।
ಳಿಂಬಾಗಿರೆ ಬರ್ಕುಮದನೆ ಪಲವೆಡೆಗಳೊಳೆಂ ॥
ದುಂ ಬಲ್ಲವರಿಡದಿರ್ಕೆ ।
ದಂ ಬಾಯುೞಿದೂಳ್ವವೋಲ್ ಕರಂ ವಿರಸತರಂ ॥ ೨೩॥

ನೃಪತೀ ಪರೋಪಕಾರೀ ।
ವಿಪುಳಗುಣೀ ವಿಶದಶಶಧರಾಯತಕೀರ್ತೀ ॥
ವ್ಯಪಗತಭಯಾ ದಯಾಲೂ ।
ರಿಪುವರ್ಗಮನಲೆದು ಗೆಲ್ವೆಯಾಹವದೊಳ್ ॥ ೨೪॥

### * ಪುನರುಕ್ತಗುಣಪ್ರಕಾರಂ.

ಕಂ|| ಅಱಿಪಿದವರುಂ ವಿಭೀತರು |
ಮಱಿಲ್ವರುಂ ಸಲೆ ವಿಯೋಗದಿಂ ನಿಜಜನದಿಂ ||
ಕಱಿಯೆ ಪರಾರ್ತಿಗಳುಂ ಬಾ |
ಯಱಿದೂಳ್ದಿಂತಿದನೆ ಯುಕ್ತಪುನರುಕ್ತಿಕಮಂ || ೨೫||

### ಲಕ್ಷ್ಯಂ.

ಪುಲಿಪುಲಿ ಪರಿಪರಿ ಪೋಪೋ |
ಗೆಲೆಎಲೆ ಪೆಱುಪಿಂಗು ಪಿಂಗು ನಿಲ್‌ನಿಲ್ ಬಾಬಾ ||
ಪುಲಿ ಮನಮನಂಜದಂಜದೆ।
ತೊಲತೊಲಗೀ ಮೆಳೆಗೆ ಪುಲಿ ಯದೆಂಬುದು ಮಾರ್ಗಂ ||೨೬||

### ಬಹುವಿಶೇಷಣ ಪ್ರಯೋಗನಿಯಮಂ.

ರೂಪಕದೊಳಂ ವಿಶೇಷಾ।
ಳಾಪೋದ್ದೇಶದೊಳಮಲ್ಲದುಱಿದೆಡೆಗಳೊಳಂ ||
ಚಾಪಲಮತಿಗಳ್ ವಿರಸಸ !
ವಿೂಪಮನಿಡದಿರ್ಕೆ ಬಹುವಿಶೇಷಣಗಣಮಂ || ೨೭||

### ಲಕ್ಷ್ಯಂ.

ಸುಭಟರ್ಕಳ್ ಕವಿಗಳ್ ಸು।
ಪ್ರಭುಗಳ್ ಚೆಲ್ವರ್ಕಳಭಿಜನರ್ಕಳ್ ಗುಣಿಗಳ್ ||
ಅಭಿಮಾನಿಗಳತ್ಯುಗ್ರರ್ |
ಗಭೀರಚಿತ್ತರ್ ವಿವೇಕಿಗಳ್ ನಾಡವರ್ಗಳ್ || ೨೮||

ಅಂತಧಿಕವಿಶೇಷಣಗಣ |
ಮಂ ತಡೆಯದೆ ಪೇಱ್ವೊಡಂಕಚಾರಣೆಗ(ಳೊ)ಳಂ ||
ಸಂತಂ ಪೇೞ್ಗುಱಿದಾವೆಡೆ |
ಯಂತರದೊಳಮಾಗದೆಂದನತಿಶಯಧವಳಂ || ೨೯||

* ಇದು ಈ ಪ್ರಕರಣದಲ್ಲಿ ಉಕ್ತವಾಗಿರುವುದು ಅನುಗುಣವಾಗಿಲ್ಲ

ಪ್ರಾಸ ವಿಚಾರಂ.

ಕಂ॥ ನುತಶಬ್ದಾಲಂಕಾರದೊ।
ಳತಿಶಯವಿೞ ಕನ್ನಡಕ್ಕೆ ಸತತಂ ಪ್ರಾಸಂ॥
ಕಕೃತ್ತ್ಯಮಲ್ಲವಲ್ಲಭ।
ಮತದಿಂದದ(ಱಾ) ಪ್ರಪಂಚವಿೞ್ತೆಱನಕ್ಕುಂ॥ ೩೦॥

ಪ್ರಾಸ ಭೇದಂಗಳ್.

ವಿನುತಪ್ರಾಸಂ ಶಾಂತೋ।
ಪನತಂ ವರ್ಗೋದಿತಂ ಸಮೀಪಗತಂ ಮ॥
ತ್ತನುಗತ ಮತ್ಯಂತಗತಂ।
ಜನಿತವಿಭೇದೋಕ್ತಿಯಿಂದಮಿಂತಾಱುತೆಱಂ॥ ೩೧॥

(ವಿನುತ) ಪ್ರಾಸಲಕ್ಷಣಂ.

ಪಾದದೊಳೆರಡನೆಯಕ್ಕರ।
ಮಾದರದಿಂದಾದುದಾವುದದನಱಿದನಿತಂ॥
ಪಾದದೊಳಿಡುವುದದಕ್ಕುಂ।
ಭೇದೋಕ್ತಕ್ರಮವಿಚಾರಿತೋರುಪ್ರಾಸಂ॥ ೩೨॥

ಲಕ್ಷ್ಯಂ.

ಮನೆಗಿಂದು ಬರ್ಕುವೊಂದಾ।
ನನೇಕತ(ರ)ವಸ್ತುವಾಹನಾದಿಯನೊಸೆದಿಂ॥
ಬ್ಬಿನೆ ಪಸರಿಸಿ ಕುಡಲಿರ್ದೆಂ।
ಜನೇಶನಿಂದೇಕೆ ಕಳೆದು ಪೋದನೊ ಪೇೞಿಂ॥ ೩೩॥

ಉಪಸಂಹೃತಿ.

ಎಂಬುದು ವಿನುತಪ್ರಾಸಂ।
ಸಂಬಂಧಾಕ್ಷರದೊಳೆಲ್ಲಮಾತ್ರೆಗಳುಂ ತ॥
ಱ್ಱಿಂಬಾಗಿ ಬೆರಸೆ ಶೋಭಾ।
ಡಂಬರಮಂ ಪಡೆಗುಮುಚಿತಕಾವ್ಯೋಕ್ತಿಗಳೊಳ್॥ ೩೪॥

ಶಾಂತಪ್ರಾಸಲಕ್ಷಣಂ.

ಕಂ|| ಬೆರಸಿರೆ ಮುಂ ಸಂಯೋಗಾ |
ಕ್ಷರಂಗಳೇಕಸ್ವರಂಗಳಿಂ ಸುಪ್ರಾಸಂ ||
ನೆರೆದು ವಿಪರ್ಯಾಸಕ್ರಮ |
ಮಿರೆ ಸತತಂ ಶಾಂತಪೂರ್ವಮಕ್ಕುಂ ಪ್ರಾಸಂ || ೩೫||

ಲಕ್ಷ್ಯಂ.

*ಪತ್ತಿ ಪ್ರಮೂದಫಲಕಮ |
ನತ್ಯುಗ್ರಗ್ರಾಹನಿವಹಸಂಕ್ಷೋಭಿತದೊಳ್ ||
ಮತ್ತೀ ರತ್ನಾಕರದೊಳ್ |
ಪುತ್ರಿಕೆಯೆನೆ ಬಳ್ದಿಳಿಂತು ಬಾಳ್ವುದೆ ಚೋದ್ಯಂ || ೩೬||

ಉಪಸಂಹೃತಿ—ವರ್ಗಪ್ರಾಸಲಕ್ಷಣಂ.

ಶಾಂತಪ್ರಾಸದ ಭೇದಮು |
ದಿಂತಕ್ಕುಂ ವರ್ಗದಕ್ಕರಂಗಳ್ ನಾಲ್ಕುಂ ||
ಸಂತಮಿರೆ ಪೇೞ್ವ ತಾಣದೊ |
ಳಂತಕ್ಕುಂ ಪ್ರಾಕ್ತನೋಕ್ತವರ್ಗಪ್ರಾಸಂ || ೩೭||

ಲಕ್ಷ್ಯಂ.

ಸಕಲಜನವಿನುತನಂ ಶತ |
ಮುಖಸದೃಶವಿಶಾಲವಿವಿಧವಿಭವೋದಯನಂ ||
ಪ್ರಗತಗುಣಗಣನನರಿಬಲ |
ವಿಘಟನನಂ ಕಂಡನಣುವನಾ ರಾಘವನಂ || ೩೮||

ಉಪಸಂಹೃತಿ—ಸಮೀಪಪ್ರಾಸಲಕ್ಷಣಂ.

ಇದು ದಲ್ ವರ್ಗಪ್ರಾಸ |
ಕ್ಕುದಾಹೃತಂ ಕುಱಿತು ಶಷಸವರ್ಣತ್ರಯಮುಂ ||
ವಿದಿತಪ್ರಾಸವಿವಿಕ್ತಾ |
ಸ್ಪದದೊಳ್ ನಿಲೆ ಪೇೞೊಡದು ಸಮೀಪಪ್ರಾಸಂ || ೩೯||

* ಭಿನ್ನ ಸಂಯುಕ್ತ ವ್ಯಂಜನಾಕ್ಷರ ಪ್ರಾಸಬದ್ಧವಾದ ಈ ಪದ್ಯವು ಈ ಗ್ರಂಥಕರ್ತನಿಂದುದಾಹೃತವಾಗಿರಬಹುದೇ, ಎಂಬ ಸಂದೇಹಕ್ಕೆ ಅವಕಾಶವುಂಟು.

ಲಕ್ಷ್ಯಂ.

೧॥ ಶಶಧರಬಿಂಬಾನನೆಯಂ।
ಝುಷಕೇತನಕೇತನಾಭತನುತನುವಂ ತಾಂ॥
ಬಿಸವಿಶದವರ್ಣೆಯುಂ ಕಂ।
ಡೊಸೆದಂ ಬನದೊಳಗೆ ಜನಕತನಯಳನಣುವಂ॥ ೪೦॥

ಉಪಸಂಹೃತಿ—ಅನುಗತ ಪ್ರಾಸಲಕ್ಷಣಂ.

ಎಂದಿಂತು ಸಮೀಪಪ್ರಾ।
ಸಂ ದರ್ಶಿತಭೇದಮಾಯ್ತನುಪ್ರಾಸಮುಮಂ॥
ಸಂಧಿಸಿದೆಣೆಯಕ್ಕರವೊಂ।
ದೊಂದಱೊಳಳವಡಿಸಿ ಬಂದೊಡನುಗತಮುಕ್ಕುಂ॥ ೪೧॥

ಲಕ್ಷ್ಯಂ.

ಜನವಿನುತನನಘನನುಪಮ।
ನನುನಯಪರನರಸನಿನಿಸು ನೆನೆನೆನೆದು ಮನೋ॥
ಜನಿತಮುದನನಿಲತನಯನ।
ನನನೃತವಚನಪ್ರಪಂಚನಂತಿರೆ ನುಡಿದಂ॥ ೪೨॥

ಉಪಸಂಹೃತಿ—ಅಂತಪ್ರಾಸಲಕ್ಷಣಂ.

ಇಂತಿದನುಪ್ರಾಸಂ ಪಾ।
ದಾಂತದೊಳೊಂದಾವುದಾನುಮಿಟ್ಟಕ್ಕರಮಂ॥
ಮುಂತಣ ಪಾದಾಂತಂಗಳೊ।
ಳುಂ ತಡೆಯದೆ ಪೇಱೆಪ್ಪೊಡಂತದಂತ್ಯಪ್ರಾಸಂ॥ ೪೩॥

ಲಕ್ಷ್ಯಂ.

ಅತಿವಿಶದ ಯಶೋವೃತ್ತಂ।
ನತಸಕಳಾರಾತಿಜನವಿತಾನಂ ಮತ್ತಂ॥
ವಿತತ ಶ್ರೀಸಂಪತ್ತಂ।
ಶತಮುಖಸದೃಶಾನುಭಾವಪದಮಂ ಪೆತ್ತಂ॥ ೪೪॥

ಕಂ|| ಪ್ರಾಸಾನು ಪ್ರಾಸಾಂತ।
ಪ್ರಾಸಂಗಳ್ ಮೂಱುಮತಿಶಯಂಗಳ್ ಪ್ರಾಸಾ॥
ಭಾಸಂಗಳುೞಿದ ಮೂಱುಂ।
ಭಾಸುರನೃಪತುಂಗದೇವವಿದಿತಕ್ರಮದಿಂ॥ ೪೫||

ಮಾರ್ಗವಿಚಾರಂ.

ಗೀತಿಕೆ|| ಅಱಿದು ಪೇನಂ ಮಾರ್ಗಗತಿಯುಂ।
ತಱಿಸಲ್ಲಾಗಮಾರ್ಗಂ ಬಹುವಿಕಲ್ಪದೊಳ್॥
ಕುಱಿತು ಪೂರ್ವಶಾಸ್ತ್ರ ಪದವಿಧಿಯುಂ।
ತೆಱಿದಿರೆ ಪೇೞ್ವೆಸಿನಿಸಂ ಕನ್ನಡದೊಳ್॥ ೪೬||

ಕರಚರಣಶರೀರಶಿರೋ।
ದರವದನಾದ್ಯವಯವಂಗಳಿವು ತಂತಮ್ಮೊಳ್॥
ದೊರೆಕೊಂಡೆಡೆಗಳೊಳೊಳವಾ।
ಗಿರೆಯುಂ ನರರೊರ್ವರೊರ್ವರಂ ಪೋಲದವೋಲ್॥ ೪೭||

ವರಶಬ್ದಾಲಂಕಾರದ।
ವಿರಚನೆಗಳ್ ನೋೞ್ಪೊಡೊಂದೆ ತೋರ್ಕೆಗಳಿಂತುಂ॥
ಪೊರೆದಿರಲೊಂದೊಂದಱೊಳಾ।
ಪರಮಕವೀಶಪ್ರಯೋಗಗತಮಾರ್ಗಂಗಳ್॥ ೪೮||

ಕವಿಗಳುಮನಾದಿಲೋಕೋ।
ದ್ಭವರಪ್ಪುದಱಿಂದನಂತಗಣನಾನುಗತಂ॥
ಸವಿಶೇಷೋಕ್ತಿಗಳುಮನಂ।
ತವಿಧಂಗಳನಂತಭೇದವದಱಿಂ ಮಾತುಂ॥ ೪೯||

ಕಂ|| ಜನಿತವಿಭಾಗಂಗಳ್ ವಾ।
ಙ್ಮನಸಾತೀತಂಗಳಿಂತು ಮಾರ್ಗೋಕ್ತಿಗಳೊಳ್||
ನೆನೆದಱಿಪಲಾರ್ಪರಾರದ।
ನನಿಶ್ಚಿತಕ್ರಮವಿಶೇಷಗುಣಯುಕ್ತಕಮಂ|| ೫೦||



### ದಕ್ಷಿಣೋತ್ತರಮಾರ್ಗಂಗಳ್

ಅಂತುಂ ಭೇದಮನಿಸಿಸಾ।
ರ್ಪಂತುತ್ತರದಕ್ಷಿಣೋರು ಮಾರ್ಗದ್ವಯಮಾ||
ಚಿಂತಿತಪುರಾಣಕವಿವಿದಿ।
ತಾಂತರಮಂ ಪೇೞ್ವೆನಱಿವ ಮಾೞ್ಕೆಯೊಳೆನ್ನಾ|| ೫೧||
ನಿಗದಿತಕಾವ್ಯೋಕ್ತಿಗಳೊಳ್।
ನೆಗೞ್ವುವು ಮಾರ್ಗಂಗಳಿಂತುಮೆರಡುಕ್ತಿಗಳುಂ||
ಬಗೆವಾಗಳೆರಡುಮಾೞ್ಕೆಯೊ।
ಳೊಗೆದುವು ವಕ್ರಸ್ವಭಾವನಿಯತಿಕ್ರಮದಿಂ|| ೫೨||
ಸತತಂ ದಕ್ಷಿಣಮಾರ್ಗೋ।
ದಿತೋಕ್ತಿ ಭೇದಕಗುಣಂ ಸ್ವಭಾವಾಖ್ಯಾನಂ||
* ವಿದಿತೋತ್ತರಮಾರ್ಗಗತಂ।
ಪ್ರತೀತವಕ್ರೋಕ್ತಿಕೃತವಿಕಲ್ಪಮನಲ್ಪಂ|| ೫೩||
ಸಮ, ಮಧುರ, ನಿಬಿಡ, ಕಾಂತ, ಸು।
ಕುಮಾರ, ಸುಸಮಾಹಿತ, ಪ್ರಸನ್ನೋ, ದಾರ,||
ಪ್ರಮಿತಾಽಗ್ರಾಮ್ಯೋ, ಜಸ್ವಿ,।
ಕ್ರಮದಿಂ ದಶಭೇದಮಲ್ಲಿ ದಕ್ಷಿಣಮಾರ್ಗಂ|| ೫೪||

* ಇಲ್ಲಿ ತಕಾರ ಪ್ರಾಸದಲ್ಲಿ, ದಕಾರವು ಬಂದಿದೆ, ಇಂತಹ ಪ್ರಾಸಗಳು ಪ್ರಾಚೀನಕನ್ನಡ ಕಾವ್ಯಗಳಲ್ಲಿಲ್ಲವೇ ಇಲ್ಲ. ಆದರೆ ಈ ಶಾಸ್ತ್ರಕಾರನು ಹೇಳಿರುವಂತೆ ವರ್ಗಪ್ರಾಸವೆಂದು ಸಾಧುತ್ವವನ್ನು ಹೇಳಬಹುದು. ಅಥವಾ ವಿತತ ಎಂದೂ ತಿದ್ದಬಹುದು.

ಕಂ|| ಅವಱ ವಿಪರ್ಯಯವೃತ್ತಿ |
ಪ್ರವಿಭಕ್ತವಿಕಲ್ಪಮಕ್ಕುಮುತ್ತರಮಾರ್ಗಂ ||
ಸವಿಶೇಷಗುಣಮನತಿಶಯು |
ಧವಳೋಕ್ತಿಕ್ರಮದಿನಱಿಪುವೆಂ ತದ್ಭವದೊಳ್ || ೫೫||

ಸಮಬಂಧಗುಣಲಕ್ಷಣಂ.

ಸಮಬಂಧಮೆಂಬುದಕ್ಕುಂ |
ಸಮನಿಸಿ ಕಿವಿಗೆದರಿ ಬಾರದಾನಂ ಮುಟ್ಟುಂ ||
ಸಮೆದ ಪದದಾವಿಭೇದ |
ಕ್ರಮಮೆರಡಕ್ಕುಂ ಮೃದುಸ್ಫುಟೋಕ್ತಿಯಿನದಱಿಂ || ೫೬||

ಸಮಬಂಧಗುಣಭೇದಂಗಳ್.

ಮೃದುತರವರ್ಣಾನುಗಮಾ |
ಪದವಿರಚನೆಯೊಳಗೆ ತೋರ್ಪುದದು ಮೃದುಬಂಧಂ ||
ವಿದಿತಸ್ಫುಟಾಕ್ಷರಾಧಿಕ |
ಪದವಿರಚಿತಮಪ್ಪುದಕ್ಕುಮಾಸ್ಫುಟ ಬಂಧಂ || ೫೭||

ಲಕ್ಷ್ಯಂ.

ದೊರೆಕೊಳೆ ನೋಡಿದನಾಯತ |
ಕರುಣಾಪಾಂಗದೊಳೆ ಲೋಲಲೋಚನಯುಗೆಯಂ ||
ಗುರುಪೀನಪಯೋಧರಯುಗ |
ಭರವಿಧುರೆಯನಾ ಧರಾಧಿಪತಿ ವಿಧುಮುಖಿಯಂ || ೫೮||

ಉಪಸಂಹೃತಿ ವಿಷಮಬಂಧಲಕ್ಷ್ಯಂ.

ಇಂತಿದು ಸಮಬಂಧದ್ವಿತ |
ಯಾಂತರಮಾ ವಿಷಮಬಂಧಮಿನ್ನಿಂತಕ್ಕುಂ ||
ಚಿಂತೈಕಸುಖಾಕ್ರಾಂತರ್ |
ಸಂತುಷ್ಟೈಕಾಗ್ರಚಿತ್ತರಾದರ್ ತಮ್ಮೊಳ್ || ೫೯||

ಮಧುರಗುಣಲಕ್ಷಣಂ.

೦|| ಸವಿಪ್ಪೊಡೆ ಮಧುರರಸಂಬೋಲ್ |
ಕಿವಿಗಿನಿದಾಗಿರ್ಪ ವಚನವಿರಚನೆ ಮಧುರಂ ||
ಸವಿಳಾಸಾಲಾಪದಿ ನವ |
ಅ ವಿಶೇಷವಿಶೇಷ್ಯವಿಂತು ಮಾರ್ಗದ್ವಯದೊಳ್ || ೬೦||

ಲಕ್ಷ್ಯಂ

ದೆಸೆಗಳ್ ವಿಳಾಸಮಾದುವು |
ಕೆಸಱಿಂ ಪಿಂಗಿತ್ತು ಧರಣಿ ತಿಳಿದುವು ಕೊಳಗಳ್ ||
ಶ್ವಸನಪಥಮಮಳಮಾಯ್ತಿಂ |
ದೊಸಗೆಗಳಂ ಬೀಱುವಂತೆ ಶರಬಾಗಮದೊಳ್ || ೬೧||

ಉಪಸಂಹೃತಿ.

ಇದು ದಕ್ಷಿಣಮಾರ್ಗವಿಭೇ |
ದದ ಮಧುರರಸಪ್ರಯೋಗಮಾಚಾರ್ಯಮನೋ ||
ಮುದಿತವಿತಾನಂ ವಿದಿತಾ |
ಸ್ಪದಮುತ್ತರಮಾರ್ಗವರ್ಗಮಧುರಾಳಾಪಂ || ೬೨||

ಉತ್ತರಮಾರ್ಗ ಮಧುರಗುಣಲಕ್ಷ್ಯಂ.

ಧವಳಜಳಧರಕುಳಾಕುಳ |
ಮವಿಕಳಮಂಬರತಳಂ ವಿನೀಳಚ್ಛಾಯಂ ||
ಕುವಳಯಕೀರ್ತಿಗೆ ಶಾರದ |
ಮವಧಾರಿತಮಾಯ್ತೆಂಬುದುತ್ತರಮಾರ್ಗಂ || ೬೩||

ನಿಬಿಡಬಂಧಗುಣಲಕ್ಷಣಂ— ಶಿಥಿಲಲಕ್ಷಣಂ.

ಮಿಗೆ ನಿಬಿಡಬಂಧಮೆಂಬುದು |
ತಗುಳ್ವುವು ವರ್ಣಂಗಳಗಲದಿರೆ ಮತ್ತಕ್ಕುಂ ||
ನೆಗಳ್ವಲ್ಪಪ್ರಾಣಾಕ್ಷರ |
ಸಿಗದಿತಮೆಂತಪ್ಪಪರ್ಯಯೋಕ್ತಂ ಶಿಥಿಲಂ || ೬೪||

ನಿಬಿಡಶಿಥಿಲ ಲಕ್ಷ್ಯಂಗಳ್.

ಕಂ|| ಅರವಿಂದೋತ್ಪಲಪುಷ್ಪೋ |
ತ್ಕರಂಗಳೊಳ್ ಪಾಯ್ದುಮುದ್ಭ್ರಮದ್ಭ್ರಮರಂಗಳ್ ||
ವಿರತಮುದವಾದುವುರುಮದ |
ವಿರಾಮವನಕರಿಕಪೋಲಫಲಕದೊಳಾಗಳ್ || ೬೫||

ಉಪಸಂಹೃತಿ—ಕಾಂತಗುಣಲಕ್ಷಣಂ.

ಇದು ನಿಬಿಡಶಿಥಿಲಬಂಧಾ |
ಸ್ಪದಮಾರ್ಗದ್ವಿತಯಗದಿತಲಕ್ಷ್ಯವಿಭಾಗಂ ||
ಸದಭಿಕಮನೀಯಗುಣಮ |
ಪ್ಪುದು ನಿಯತಂ ಕಾಂತಮೆಂಬುದಭಿಗೀತಾರ್ಥಂ || ೬೬||

ದಕ್ಷಿಣಮಾರ್ಗ ಕಾಂತಗುಣಲಕ್ಷ್ಯಂ.

ದಿನಕರಕರ ನಿಕರಂಗಳ್ |
ಘನವಿವರಪ್ರಸರಮಾಗಿಯುಂ ತಮ್ಮಂ ಕಂ ||
ಡನಿತಱಿೞೆ ತೆರಳ್ದಿನ್ನಾ |
ಮನೋಗತಧ್ವಾಂತಬಂಧಮುಳಱಿತ್ತೆಲ್ಲಂ || ೬೭||

ಉಪಸಂಹೃತಿ—ಉತ್ತರಮಾರ್ಗ ಕಾಂತಗುಣಂ.

ಇಂತಿದು ದಕ್ಷಿಣಮಾರ್ಗದ |
ಕಾಂತಮಸಂಭಾವಿತಾರ್ಥಮುದ್ಭಾವೋಕ್ತಂ ||
ಸಂತತಮುತ್ತರಮಾರ್ಗಗ |
ತಾಂತರಮದನಿಂತು ಕುಱಿತು ತಱಿಸಲ್ಕೆ ಬುಧರ್ || ೬೮||

ಲಕ್ಷ್ಯಂ.

ವಿಲಸಿತಭವದಭ್ಯಾಗಮ |
ಜಲಧಾರೆಗಳೇನುಮುೞಿಯದಂತು ಮದಂತ ||
ರ್ಮಲಮಂ ಕರ್ಚಿದೊಡಾನೀ |
ನೆಲಕೆಲ್ಲಂ ಪಾವನೀಯಚರಿತನೆನಾದೆಂ || ೬೯||

ಸುಕುಮಾರಗುಣಲಕ್ಷಣಂ.

ಕಂ|| ಸುಕುಮಾರತರಾಕ್ಷರಪದ |
ನಿಕರವಿಶಿಷ್ಟಪ್ರಯೋಗಗತಮಪ್ಪುದದಾ ||
ಸುಕುಮಾರವೆಂಬುದಕ್ಕುಂ |
ಪ್ರಕಟಿತಮದಱಾ ಪ್ರಯೋಗವಿೂತೆಱನಕ್ಕುಂ || ೭೦||

ದಕ್ಷಿಣಮಾರ್ಗ ಸುಕುಮಾರಲಕ್ಷ್ಯಂ

ತೊಳಪೆಳವೆಱೆಯುಂ ಮೊರೆವಳಿ |
ಕುಳಂಗಳುಂ ಮೆಲ್ಲನೆಸೆವ ಮಳಯಾನಿಳನುಂ ||
ಮುಳಿಸಂ ಕಱಲ್ಚಿ ಕಳೆದುವು |
ಕಳಿಕಾಂಕುರಚೂತತತಿಗಳುಂ ಕಾಮಿಗಳಾ || ೭೧||

ಉತ್ತರಮಾರ್ಗ ಸುಕುಮಾರಲಕ್ಷ್ಯಲಕ್ಷಣಂ.

ಇದಱ ವಿಪರ್ಯಯವಿವಿಧಾ |
ಸ್ಪದಾಕ್ಷರವಿಕಲ್ಪವಿಂತಿದುತ್ತರಮಾರ್ಗಂ ||
ತ್ರಿದಶಾಧೀಶ್ವರಭೂತ್ಯ |
ತ್ಯುದಾರವಿವಿಧಾರ್ಥವಿಭವನೀ ಭೂಪೇಂದ್ರಂ || ೭೨||

ಸಮಾಹಿತ ಗುಣಲಕ್ಷಣಂ.

ಒಂದಱ ಮಾತುಗಳಂ ಪೆಱ |
ತೊಂದಱೊಳಱಿದಿಟ್ಟು ಕೂಡೆ ಪೇೞ್ದೊಡದಕ್ಕುಂ ||
ಸುಂದರತರಂ ಸಮಾಹಿತ |
ಮೆಂದುಂ ಮತ್ತದಱ ಲಕ್ಷ್ಯವಿೂತೆಱನಕ್ಕುಂ || ೭೩||

ಲಕ್ಷ್ಯಂ.

ವಿನಿಮಿೂಳಿತಕುಮುದವನಂ |
ಜನಿತೋನ್ಮೀಲಾರವಿಂದವನಲಕ್ಷ್ಮೀಶಂ ||
ದಿನಕರನುದಯಂಗೆಯ್ದಂ |
ವಿನಿಹತತಿಮಿರಂ ವಿಶಿಷ್ಟಸಂಧ್ಯಾಶ್ಲೇಷಂ || ೭೪||

ಲಕ್ಷಣ ಸಮನ್ವಯಂ.

ಕಂ|| ವಿನಿಮೀಳಾದಿಗಳಿವು ಲೋ।
ಚನಾದಿಧರ್ಮಂಗಳಿವನೆ ಕುಮುದಾದಿಗಳೊಳ್ ||
ನೆನೆದಿಂತು ಪೇೞ್ದೊಡಕ್ಕುಂ।
ವಿನಿಶ್ಚಿತಕ್ರಮಸಮಾಹಿತಾಲಂಕಾರಂ || ೭೫||

ವಿನಿಮೀಲಾದಿಗಳ ಸಹಜ ಪ್ರಯೋಗಲಕ್ಷ್ಯಂ.

ವಿನಿಹತಸಮಸ್ತರಿಪುಕುಳ।
ನನಿಮಿಷಲೋಚನನೆ ನೋಡಿ ನೀಡುಂ ಪ್ರಿಯೆಯಂ ||
ವಿನಿಮೀಳಿತಲೋಚನೆಯಂ।
ಜನಪತಿ ನಿಜಬಾಹುಯುಗದಿನಾಶ್ಲೇಷಿಸಿದಂ || ೭೬||

ಉಪಸಂಹೃತಿ—ಪ್ರಸನ್ನಗುಣಲಕ್ಷಣಂ.

ಈ ಕುಱಿಪುಗಳಿಂದಱಿವುದ।
ನೇಕಸಮಾಹಿತ ಪದಪ್ರಯೋಗಾಂತರಮಂ ||
ಲೋಕಪ್ರತೀತಸುಭಗವಿ।
ವೇಕಾಲಾಪಂ ಪ್ರಸನ್ನಮದುಮಿಂತಕ್ಕುಂ || ೭೭||

ಲಕ್ಷ್ಯಂ.

ಶರದಮಲಾಂಬರದೊಳ್ ಹಿಮ।
ಕರನೆಸೆದತ್ತಂಬುದಾಪ್ರಸನ್ನಮಿದಕ್ಕುಂ ||
ಕರಮೊಪ್ಪಿತ್ತುಷ್ಣೇತರ।
ಕಿರಣಂ ವರ್ಷಾಂತಸಮಯಜಳಧರಪಥದೊಳ್ || ೭೮||

ಉದಾರ ಗುಣಲಕ್ಷಣಂ.

ಮಿಗೆ ವಸ್ತುಗತಸ್ಥಿತಿಯಂ।
ಬಗೆದಗ್ಗಳಮಾಗಿ ಪೇೞ್ದೊಡಕ್ಕುಮುದಾರಂ ||
ಬಗೆವೊಡೆ ಕಾವ್ಯದ ಪದವಿಯ।
ನೆಗೞ್ತೆಗದು ಮೂಲಮದಱ ಪಾಂಗಿಂತಕ್ಕುಂ || ೭೯||

ಲಕ್ಷ್ಯಂ.

ಕಂ|| ಪುರುಷೋತ್ತಮರಾರ್ ನಿನ್ನ |
ನ್ನರುದಾರಾರಾತಿಸವಿತಿಯುಂ ಕೊಂಡಿರ್ದುಂ ||
ಸುರಸುಂದರಿ ಲೀಲಾಲಸ |
ಪರಿರಂಭಾರಂಭಸುರತಸುಖದೊಳ್ ಸಿಲಿಪರ್ || ೮೦||

ಉಪಸಂಹೃತಿ—ಉತ್ತರಮಾಗೋದಾರ ಗುಣಲಕ್ಷ್ಯಂ.

ಇದು ದಾಕ್ಷಿಣಾತ್ಯಕವಿಮಾ |
ರ್ಗದುದಾರವುದೀಚ್ಯರುರುವಿಶೇಷಣಯುತಮು ||
ಪ್ಪುದನೊಲ್ದರಿಂತು ಹೇಮಾಂ |
ಗದನೀಲಾಂಬುಜವಿಚಿತ್ರಚಿತ್ರಾಧಿಕಮುಂ || ೮೧||

ಗ್ರಾಮ್ಯಾಳಾಪಲಕ್ಷಣಂ.

ಗೋಪಾಳಬಾಳಲಲನಾ |
ಚಾಪಳವಾಚಾಳಕಿತವಬಾಹ್ಲೀಕಾದಿ ||
ವ್ಯಾಪಾರಂಗಳ್ ಗ್ರಾಮ್ಯಾ |
ಳಾಪಂಗಳ್ ಮಾರ್ಗಯುಗಳಪರಿಹಾರ್ಯಂಗಳ್ || ೮೨||

ಲಕ್ಷ್ಯಂ.

ನೆನೆದಿರುಳುಂ ಪಗಲುಂ ನಿ |
ನ್ನನೆ ಪೇನವೊಱಲ್ದು ಮಱುಗಿ ಕಾತರಿಸುತ್ತುಂ ||
ಮನದೊಳ್ ಸೈರಿಸಲಾಱೆಂ |
ನಿನಗಿನಿಸುಂ ಕರುಣವಿಲ್ಲ ಮದವಾನಿನಸೈ || ೮೩||

ಅಗ್ರಾಮ್ಯಗುಣಲಕ್ಷಣಲಕ್ಷ್ಯಂಗಳ್.

ಎಂದಿಂತೀ ಗ್ರಾಮ್ಯೋಕ್ತಿಯೊ |
ಳೊಂದಾಗಿಸದಪನೆ ಪೇಳ್ವುದಿಂತೀಸ್ಥಿತಿಯೊಳ್ ||
ಕಂದರ್ಪಂ ಚಲದೆನ್ನೊಳ್ |
ನಿಂದಂ ಮುನಿಸಿಲ್ಲ ನಿನ್ನೊಳಾತಂಗಿನಿಸುಂ|| ೮೪||

ಓಜೋಗುಣಲಕ್ಷಣಂ.

ಕಂ|| ಸಮುಱಿ ಸಮಾಸಪದಂಗಳ |
ನಮರ್ದಿರೆ ಸಯ್ತಾಗಿ ಬಗೆದು ಪೇೞ್ದೊಡವಕ್ಕುಂ ||
ಕ್ರಮದೋಜೋಲಕ್ಷಣಮು |
ತ್ತಮಮಿದು ಗದ್ಯಕ್ಕಲಂಕ್ರಿಯಾ(ತ್ಮ)ಸಮೇತಂ || ೮೫||

ಮಿಗೆ ಪದ್ಯದೊಳಂ ಗುಣಮಂ |
ತಗುಳ್ಚುಗುಂ ಸಮುಹಿತಪ್ರಯೋಗಾನುಗತಂ ||
ಸೊಗಯಿಸುವಂತಿರೆ ಬಗೆದಿದ |
ನಗಾಧಮನರಿಡುಗೆ ಕೃತಿಯೊಳೋಜೋಗುಣಮುಂ || ೮೬||

ಕಾರಕಮಂ ಕ್ರಿಯೆಯುಮನಱಿ |
ದೋರಂತಿರೆ ಮುಂ ತಗುಳ್ಚಿ ನುಕ್ತಕಪದದೊಳ್ ||
ಸಾರಂ ಸಮಾಸಪದದು |
ಚ್ಚಾರಣೆಯಂ ನೀಳ್ದು ನಿಲೆ ತಗುಳ್ಚುಗೆ ಕೃತಿಯೊಳ್ || ೮೭||

ಮೊದಲೊಳ್ ಸಮಾಸಪದಮುಮ |
ನೊದವಿಸಿ ಪೇೞ್ದದಱ ತುದಿಯೊಳಸಮಾಸಪದಾ ||
ಸ್ಪದಮಾಗಿ ನಿಱಿಸೆ ಕವ್ವಿನ |
ತುದಿಯಂತಿರೆ ವಿರಸಮಕ್ಕುಮದು ತೊದಳುಂಟೇ || ೮೮||

ವಿರುದ್ಧಲಕ್ಷ್ಯಂ.

ಪರಮಾನುಭಾವಭಾಸುರ |
ಸುರರಾಜೋಪಮಿತವಿವಿಧವಿಭವೋದಯನಂ ||
ನರಪತಿಯಂ ಕಪಿಪ್ರತನಾ |
ಪರಿವೃತನಂ ಜಲಧಿತಟದೊಳಣುವಂ ಕಂಡಂ || ೮೯||

ಕಂ|| ಎಂದಿಂತು ಪೇೞ್ದ ಮಾಱ್ಕೆ ಯೊ |
ಳೊಂದುವುದೋಜಸ್ವಿತಾಗುಣಂ ಕೈಕೊಳೆಯುಂ ||
ಸುಂದರಮಾಗದು ಕವಿಪದ |
ಮೆಂದುಂ ವ್ಯತ್ಯಯದಿಸಿಡುವೊಡದು ಸುಕರತರಂ || ೯೦||

ಓಜೋಗುಣಲಕ್ಷ್ಯಂ.

ನರಪತಿಯಂ ಕಪಿಪೃತನಾ |
ಪರಿವೃತನಂ ಜಳಧಿತಟದೊಳಣುವಂ ಕಂಡಂ ||
ಪರಮಾನುಭಾವಭಾಸುರ |
ಸುರರಾಜೋಪಮಿತವಿವಿಧವಿಭವೋದಯನಂ || ೯೧||

ವಿಶೇಷಣವಿಶೇಷ್ಯಪದಸಮಾಸವಿಚಾರಂ.

ಬೆರಸಿರೆ ಸಮಾಸದೊಳ್ ಬಂ |
ಧುರಮಾಗದು ಕಾವ್ಯಬಂಧಮೆಂದುಂ ಕೃತಿಯೊಳ್ ||
ದೊರೆಕೊಳ್ವ ಪದವಿಶೇಷ್ಯಾಂ |
ತರಮುದಱಿಂ ವ್ಯಸ್ತಮಾಗಿ ಪೇೞ್ಗಿದನೆಂದುಂ || ೯೨||

ಪರಿದೆಯ್ದಿ ತಾಗಿದಂ ಭಾ |
ಸುರತರರಘುಕುಲಲಲಾಮಲಕ್ಷ್ಮೀಧರನೊಳ್ ||
ಪರಿಕೋಪವಿಧೃತವಿಸ್ಫುರ |
ದುರುರಕ್ತಕಠೋರನಯನಯು(ಗ)ದಶವದನಂ || ೯೩||

ಇಂತು ವಿಶೇಷ್ಯಂ ಕ್ರಿಯೆಯಂ |
ಸಂತಂ ನೋೞ್ಪುದಱಿಸಕ್ಕುಮದು ಸಾಪೇಕ್ಷಂ ||
ಚಿಂತಿಸಿ ಸಮಾಸಮಂ ಪೇ |
ೞ್ವಂತಪ್ಪ ಪದಂ ಸಮರ್ಥಮಲ್ತಪ್ಪುದಱಿಂ || ೯೪||

ಕಂ|| ಸಮನಿಸೆ ಸಾಪೇಕ್ಷಮುಮಾ।
ಸಮಾಸಮುಂ ಪೆಱುಗುಮೆಲ್ಲಿಯಾನುಂ ಗಮಕಂ ||
ಕ್ರಮಮುದಱಿಕೊಳೆಲ್ಲಮೆನಲಿನಿ।
ತು ಮಾರ್ಗದೊಳ್ ಸಮ್ಮಱುಗಿಂತು ಕವಿವೃಷಭರ್ಕಳ್ || ೯೫||

ಪರಿದೆಯ್ದಿ ತಾಗಿದಂ ಭಾ।
ಸುರತರರಘುಕುಲಲಲಾಮನೊಳ್ ಲಕ್ಷ್ಮಣನೊಳ್ ||
ಪರಿಕೋಪವಶಭ್ರಮಣೋ।
ದ್ಧುರರಕ್ತಕಠೋರಲೋಚನಂ ದಶವದನಂ || ೯೬||

ಉಪಸಂಹೃತಿ.

ಇಂತಿರೆ ಮಾರ್ಗದ್ವಿತಯಗ।
ತಾಂತರಮಂ ಪೇೞ್ದೆನೆಲ್ಲಿಯುಂ ಕ್ಷೀರಗುಡಾ ||
ದ್ಯಂತರರಸಾಂತರಂ ಜಾ।
ತ್ಯಂತರಮಪ್ಪಂತನಂತಮಂತರ್ಭೇದಂ || ೯೭||

ರಸಾನುರೂಪಗುಣವಿಭಾಗಂ.

ಗೀತಿಗೆ|| ಬಗೆದು ಮಾರ್ಗದ್ವಿತಯ ಗತಿಗಳಂ।
ಪ್ರಗುಣಗುಣೋದಯರ್ಕಳ್ ವಿತರ್ಕದಿಂ ||
ಸೊಗಯಿಸುವಂತು ವಚನರಚನೆಯಿಂ।
ನೆಗೞ್ದಿರೆ ಬೆರಸಿ ಪೇೞ್ಗೆ ರಸವಿಶೇಷದೊಳ್ || ೯೮||

ಉ|| ವೀರರಸಂ ಸ್ಫುಟೋಕ್ತಿಯಿನುದಾರತಮಂ ಕರುಣಾರಸಂ ಮೃದೂ।
ಚ್ಚಾರಣೆಯಿಂದಮದ್ಭುತರಸಂ ನಿಬಿಡೋಕ್ತಿಗಳಿಂದಮಲ್ತೆ ಶೃಂ||
ಗಾರರಸಂ ಸಮಂತು ಸುಕುಮಾರತರೋಕ್ತಿಗಳಿಂ ಪ್ರಸನ್ನಗಂ।
ಭೀರತರೋಕ್ತಿಯಿಂ ಪ್ರಕಟಮಕ್ಕೆ ರಸಂ ಸತತಂ ಪ್ರಶಾಂತದಿಂ || ೯೯||

ಉ|| ಉತ್ಸವದಿಂದೆ ಹಾಸ್ಯರಸ ಮಾ ಮಧುರೋಕ್ತಿಗಳಿಂದಮಲ್ತೆ ಬೀ |
ಭತ್ಸರಸಾಂತರಂ ಶಿಥಿಲಬಂಧನದಿಂ ಸತತಂ ಭಯಾನಕೋ ||
ದ್ಯತ್ಸರಸಂ ಕರಂ ವಿಷಮಬಂಧನದಿಂ ನೃಪತುಂಗದೇವಮಾ |
ರ್ಗೋತ್ಸವಮೂರ್ಜಿತೋಕ್ತಿಗಳಿನಕ್ಕತಿರೌದ್ರರಸಂ ರಸಾವಹಂ || ೧೦೦||

ಮಾತುಗಳಾವುವಾನುಮುಪವರ್ಣಿತಮಾರ್ಗಯುತಪ್ರಯೋಗಸಂ |
ಜಾತವಿಭಾಗದಿಂ ನೆಗೞ್ದ ಕನ್ನಡದೊಳ್ ಗುಣಮಂ ತಗುಳ್ಚುಗುಂ ||
ನೀತಿನಿರಂತರಾನುಗತವೃತ್ತಿವಿಕಲ್ಪಿತಮಂ ತದೀಯವಿ |
ಸ್ಸೀತಿಯನೀತೆವೆತ್ತು ತಳೆಸಲ್ಗೆ ಬುಧೋತ್ತಮರುಕ್ತಿಪೂರ್ವಕಂ|| ೧೦೧||

ಉತ್ತರದಕ್ಷಿಣಮಾರ್ಗಾನುರೂಪಪದಪ್ರಯೋಗವಿಚಾರಂ.

ನೋಡುವೆನಾ ಮಹೀಪತಿಯನರ್ಥಿಗಣಾರ್ಥಿತಕಲ್ಪವೃಕ್ಷನಂ |
ಬೇಡುವೆನರ್ಥಸಂಚಯಮನೆಂಬುದುದುತ್ತರಮಾರ್ಗವಾಚಕಂ ||
ನೀಡುಮುದಾತ್ತಚಾರುಗುಣನಂ ಮನದೊಳ್ ನೆಱೆ ನೋಟ್ಪೆನಟ್ಟಿಯೊಳ್ |
ಕೂಡಿರವೇಟ್ಪೆನೆಂಬುದದು ದಕ್ಷಿಣಮಾರ್ಗವಿಚಕ್ಷಣೋದಿತಂ || ೧೦೨||

ಸೂಡುವೆನೆಂಬುದಲ್ಲದಣಮಾಗದು ಸೂಟ್ಪೆನವೋಘಮೆಂಬುದುಂ |
ಕೂಡುವೆನೆಂಬುದಲ್ಲದಿನಿಸಾವುದುಮಾಗದು ಕೂಟ್ಪೆನೆಂಬುದುಂ ||
ಕಾಡುವೆನೆಂಬುದಲ್ಲದೆ ಸುಮಾರ್ಗದೊಳಾಗದು ಕಾಟ್ಪೆನೆಂಬುದುಂ |
ತೋಡುವೆನೆಂಬುದಲ್ಲದಿರಲಾಗದು ನಿಕ್ಕುವ ತೋಟ್ಪೆನೆಂಬುದುಂ || ೧೦೩||

ಚಂ|| ಒಱಸುವೆನಿಂದು ನಂದನವನಾಂತರದಲ್ಲಿಗೆ ಕಾಂತನಂ ಸಮುಂ |
ತಿರಿಸುವೆನಂತಸಂತ್ರಸುಖಸಂಗತಮಂಗಳಕಾರಣಂಗಳಂ ||
ತರಿಸುವೆನಾಂ ಮನೋನಯನವಲ್ಲಭನೊಳ್, ಮನದೊಂದಲಂಪಿನಿಂ |
ನೆರಪೆನವೋಘಮೆಂಬುದದು ದಕ್ಷಿಣಮಾರ್ಗವಿಶೇಷಭಾಷಿತಂ || ೧೦೪||

ಚಂ|| ಬರಿಪೆನಮೋಘಮಿಂದುಪವನಾಂತರದಲ್ಲಿಗೆ ನಲ್ಲನಂ ತಗು |
ಳ್ದಿರಿಪೆನನಾರತಂ ಸುರತರಾಗನಿರೂಪಣಕಾರಣಂಗಳಂ ||
ತರಿಪೆನನಾಕುಳಂ ಮನದಲಂಪಿನೊಳಾ ಮದನೋಪಮಾನನೊಳ್ |
ನೆರವೆನಭಂಗದೆಂಬ ವಚನಂಗಳಿವುತ್ತರಮಾರ್ಗವರ್ತಿಗಳ್ || ೧೦೫||

ಅನುಪಮನಂ ಬರಿಪ್ಪೆನನುರಾಗದೆ ನಲ್ಲನನಿಂದು ಮಿಕ್ಕ ನಂ |
ದನವನದಲ್ಲಿ [ಗಲ್ಲಿ]ಗೆ ತರಿಪ್ಪೆನನಂಗಸುಖೋಚಿತಂಗಳಾ ||
ನ್ನನುನಯದಿಂದಿರಿಪ್ಪೆನಿನಿತಂ ಸುರತಾಸವಸೇವನಾಸನಾ |
ತನಸುಖದಿಂದಿರಿಪ್ಪೆನನುರಾಗದಿನೆಂಬುದಿದುತ್ತರೋತ್ತರಂ || ೧೦೬||

ಪರಸುವೆನೆನ್ನದಾಂ ಪರಪೆನೆಂಬುದಿದಾಗದು ಚಿತ್ತನಾಥನೊಳ್ |
ಬೆರಸುವೆನೆನ್ನದಾಂ ಬೆರಪೆನೆಂಬುದಿದಾಗದು ಮಾರ್ಗಯುಗ್ಮದೊಳ್ ||
ನಿರತಿಶಯಾನುಭಾವಭವನಪ್ಪ ಮಹಾನೃಪತುಂಗದೇವನಾ |
ದರದೊಳೆ ಪೇಳ್ದ ಮಾರ್ಗಗತಿಯಿಂ ತಱಿಸಲ್ಗಿದನಿಂತೆ ಕಬ್ಬಿಗರ್ ||೧೦೭||

ಮನದೊಳಗಾಗಳುಂ ನಿಱಿಸದಾಮುಳಿಸಂ ಗತರಾಗಮೋಹನೊ |
ಯ್ಯನೆ ಮುನಿನಾಥನೆಂಬವಚನಾಂತರಮಿಂತಿದು ದಾಕ್ಷಿಣಾತ್ಯಕಂ ||
ಮನದೊಳಗಾಗಳುಂ ನಿಱಿಸದೊಯ್ಯನೆ ಮೋಹಮುನಂತೆ ರಾಗಮಂ |
ಮುನಿಸುಮನಲ್ಲದಂ ಮುನಿಪನೆಂಬುದಿದಕ್ಕುಮುದೀಚ್ಯವಾಚಕಂ ||೧೦೮||

ತ್ರಿದಶಗಣೇಶಮೌಳಿಮಣಿಪೀಠನಿಷೇವಿಗಳೊಳ್ ಮುನೀಂದ್ರನಾ |
ಪದಯುಗಳಂಗಳೊಳ್ ಮುದದೆ ಬಾಗುವೆನೆಂಬುದು ದಕ್ಷಿಣಾಯನಂ |
ವಿದಿತಸುರಾಧಿರಾಜಮಕುಟಾಗ್ರಸಮರ್ಪಿತದೊಳ್ ಮುನೀಂದ್ರನಾ |
ಪದಯುಗದೊಳ್ ಮನೋಮುದದೆ ಬಾಗುವೆನೆಂಬುದಿದುತ್ತರಾಯಣಂ || ೧೦೯||

ಉ॥ ವಿಳಸಿತಸಸ್ಯಸಂಪದಭಿರಾಮಗುಣೋದಯೆ ತಾಳ್ದಿದಳ್ ಧರಾ ।
ಳಳನೆ ವಿಶಾಲಲಕ್ಷ್ಮಿಯನನಾಕುಳಮೆಂಬುದು **ದಕ್ಷಿಣಾಪಥಂ** ॥
ಜಳನಿಧಿಮೇಖಳಾವಳಯಿತಾಂಗಿ ಕರಂ ಸೊಗಯಿಪ್ಪುದಾಯ್ತು ಭೂ ।
ಲಳನೆ ವಿಶಾಳಲಕ್ಷ್ಮಿಯಿನನಾಕುಳಮೆಂಬುದಿ**ದುತ್ತರಾಪಥಂ** ॥ ೧೧೦॥

ಗೀತಿಗೆ॥ ಸಿಕ್ಕುವ ವಿಂತು ಮಾರ್ಗಯುಗದೊಳ್ ।
ತಕ್ಕುದನಱಿಯೆ ಪೇೞ್ದೆನಿನಿಸೊಂದುದ್ದೇಶಮಂ ॥
ವಿಕ್ಕಗುಣೋದಯರ್ ಕಳೆಯುದೆಂತು ಸ ।
ಯ್ತಕ್ಕುಮಂತಾಗೆ ಬಗೆವು ಪೇೞ್ಗೆ ಕಬ್ಬದೊಳ್ ॥ ೧೧೧॥

* [ವಿಕ್ಕ ಶಬ್ದಾಲಂಕಾರಮಕ್ಕುಂ ದುಷ್ಕರಂ]
ದುಷ್ಕರಮಪ್ಪ ಶಬ್ದಾಲಂಕಾರಂಗಳ ಪೆಸರ್ ॥

† ... ... .. ... ... ।
... ... ... ... ... ॥

[**ಗೋಮೂತ್ರಿಕಂ ಸ**] **ಯಮಕಂ ಪ್ರೇಮದಿಂ ಗೋಪಿತಕ್ರಿಯಂ** ।
**ಶ್ರೀಮದರ್ಧಭ್ರಮಂ ಚಕ್ರನಾಮಂ ಮುರಜಬಂಧಕಂ** ॥ ೧೧೨॥

ಇವು ದುಷ್ಕರ ಕಾವ್ಯಂಗಳ್ (ಕ)ವಿಶೇಷಪವರ್ತಿಗಳ್ ।
ಸುವಿಚಾರಿತಮೊತೋರ್ಪೆವಿವ(ಱಾ) ಲಕ್ಷ್ಯಭೇದಮಂ ॥ ೧೧೩॥

ಗತಪ್ರತ್ಯಾಗತಲಕ್ಷಣಭೇದಂಗಳ್.

ಪದಪಾದ ಸಮುಪಾರ್ಥ(ಗತ)ಭೇದಚತುಷ್ಟಯಂ ।
ವಿದಿತಾಲಂಕ್ರಿಯಾಧಾರಂ ಮೊದಲ್ ಪೇೞ್ದುದು ದುಷ್ಕರಂ॥ ೧೧೪॥

---

* ಇದೊಂದು ಪದ್ಯಭಾಗವೆಂದು ತೋರುವುದು.

† ಇಲ್ಲಿಗ್ರಂಥಪಾತವಾಗಿದೆ. ಮುಂದೆ ದುಷ್ಕರವಾದ ಶಬ್ದಾಲಂಕಾರಗಳ ಹೆಸರನ್ನು ಹೇಳುವ ಸಂದರ್ಭವಾದುದರಿಂದ :—

ಗತಪ್ರತ್ಯಾಗತಂ ಗೂಢಚತುರ್ಥಂ ದ್ವ್ಯಕ್ಷರಾದಿಕಂ ।
ಅತಾಲವ್ಯಂ ನಿರೋಷ್ಠ್ಯಂ ಸರ್ವತೋಭದ್ರಂ ನಿರುತ್ತರಂ ॥

ಎಂಬ ಪದ್ಯ ಇರಬಹುದೆಂದು ಕಾಣುವುದು.

whether in order or tangle these letters are suspicious

ಪದಗತಪ್ರತ್ಯಾಗತ.

* ಮುನ್ನಂ ತನ್ನಂ (ತಾನೆ)ತಾನೇ ಕೆನ್ನಂ ಕೆನ್ನಂ ನಿರಂತರಂ ।
ಭಿನ್ನಂ ಬಂದಿಪ್ಪನಂತಿನ್ನುಂ ತಪ್ಪಿಂ ತನಗ್ರಮೇವಳೊ ॥ ೧೧೫॥

ಪಾದಗತಪ್ರತ್ಯಾಗತ.

{ 1 ಭಿಂನಂ ಕುಡುದಿದಕ್ಕೆಂ ಕೆಳಾವಾನಮಾನಳಿನಂ ।
ನಿಂನು ದಾತಾ ನಿಂತಳಿ ಜನಂಕನಾನದೆಸ ನೆದೇನನಾ ॥ }

2 ಪೀನಂ ಕಾಡು ಮದಕ್ಕೇಂ ಕೇಳಾನಮಾನಳಿನಂ ಮದಾ ।
ತಾನಿಂತಳಿಜನಂಕ...ನಾನದೇಸನೆ ದೇನನಾ ॥ ೧೧೬॥

ಸಮಸ್ತಗತಪ್ರತ್ಯಾಗತ.

ನಾದಭೇದನನಾ(ದಾನಾ) ನಾದಾನಾಮದನೋದನಾ ।
ನಾದನೋದಮನಾದಾನಾನಾದಾನಾನದಭೇದನಾ ॥ ೧೧೭॥

ಅರ್ಥಗತಪ್ರತ್ಯಾಗತ

ನಾನಮಾನಮಸೇನಾಸೇಸೇನಾಸೇ ಮನನಾಪಿನಾ ।
ದೀನಮಾನಮನಾನಾಪೀದೀನಾನಾಮನಮಾನಪೀ ॥ ೧೧೮॥

ಉಪಸಂಹೃತಿ.

ಗತಪ್ರತ್ಯಾಗತೋಪಾತ್ತ ಚತುಷ್ಟಯವಿಕಲ್ಪ(ಪಿಂ) ।
ಪ್ರತೀತಿದೊರ್ಪೆನಾ ಗೂಢಚತುರ್ಥ[ಂ]ಗಳ ಲಕ್ಷ್ಯಮುಂ ॥ ೧೧೯॥

ಗೂಢಚತುರ್ಥಂ.

ಘನಸ್ತನಿತಮುಂ ಕೇಕಿಸ್ವನಮುಂ ನೀರಧಾರೆಯುಂ ।
ಮನಂಬೆರ್ಚಿಕ್ಕುರ್ವಿಂತೆತ್ತಂ ಘನವಿಂತು ಘನಸ್ತನಿ ॥ ೧೨೦॥

(ಇದು ಗೂಢಚತುರ್ಥಂ)

---

* ಪದಪಾದಗಪ್ರತ್ಯಾಗತಲಕ್ಷ್ಯಪದ್ಯಗಳಲ್ಲಿ ವಿಶೇಷತಪ್ಪಿರುವಂತೆ ತೋರುವುದು.

(1) ಮದ್ರಾಸ್ ಲೈಬರಿಯಲ್ಲಿಯ ಪುಸ್ತಕದ ಪಾಠ. (2) ಮುದ್ರಿತ ಪುಸ್ತಕದ ಪಾಠ. ಇವೆರಡೂ ಒಂದೇ ಪದ್ಯಗಳು. ಲೇಖಕದೋಷದಿಂದ ವಿಶೇಷವಾಗಿ ಭಿನ್ನವಾಗಿರುವಂತೆ ತೋರುವುವು.

### ಏಕಾಕ್ಷರಂ.

ನಿಂನಿಂ ನಿಂನ್ನನೆನೆ[ೀ] ನಿನ್ನಾ (ನಂ)ನಾನಾನನನಂ [ನ]ನಂ ।
ನಿಂನೆನಂನಂನನಾನಾನಾನಿಂನಿನೇನನನೂನನಂ ॥ ೧೨೧॥

### ದ್ವ್ಯಕ್ಷರಂ.

ಮಾನಿನೀ ಮುಂನಮಾಂ ನೀನೆ ನೀನಾನಿಂನನುಮಾನ್ನಮೇಂ ।
ಮಾನಮಾನಾನೆ ಮುಂನಂನ್ನೈ ಮಾನಮಾನನಮುಂನಿನಾ ॥ ೧೨೨॥

(ಇವು ಏಕಾಕ್ಷರದ್ವ್ಯಕ್ಷರಂಗಳ್)

### ಅತಾಲವ್ಯಾದಿಗಳ್.

ಕಿಡಿಪಂ ಬಾರಗೇ ಮೆಯ್ಯಂ ಕಿಡಿಪಂ ಕಿಡಿಪಂತೆ ಮುಂ ।
ಕಿಡಿಪಂ ಪೋಕುಮೇ ತಾಮುಂ ಕಿಡಿಸಲ್ಪಡಿಪೋಲಮೇ ॥ ೧೨೩॥
ಮಾರುತೀ ಪರವೋದಾರದಾರನೊಳ್ ಕೂಡು ನಲ್ಲನೊಳ್ ।
ಸಾರಕಾದಂಬಿನೀನಾಥನಾರೂಢಗುಣಧಾಮನೊಳ್ ॥ ೧೨೪॥

(ಇದು ಅತಾಲವ್ಯಂ)

ನರನಾಯಕನಂ ನಿಂದಾನಿರದೀಗಳೆ ಕಾಂತನಂ ।
ನೆರದೇನದಱಿಂದಿಲ್ಲಾ ನೆರೆದಿರ್ದಾಗನಾಗನೇ ॥ ೧೨೫॥

(ಇದು ನಿರೋಷ್ಠ್ಯಂ)

ದೀನಾನದಿ ನಾನೇನಾನಾನಿನ್ನ [ಂನಾನೆ] ನಾನೆನಾ ।
ದೀನಾಬಾನಿನಿದಾನಾದಿನೀನೆ ನಿನ್ನಂ ನನಿನ್ನೆನಿಂ ॥ ೧೨೬॥

(ಇದು ಸರ್ವತೋಭದ್ರಂ)

ಪೆಱರಾವಂ ಧರಾಚಕ್ರಕ್ಕೆಱೆಯಂ ಕೆಳೆಯಪ್ಪವಂ ।
ನೆಱೆಯಾರೆಣೆಯೆಂಬನ್ನಂ ಕುಱಿತಬ್ಧಿಗೆ ಬನ್ನಮಂ ॥ ೧೨೭॥

(ಇದು ನಿರುತ್ತರಂ)

ಜಲದಾಗಮದಿಂ ಚಿತ್ತಸ್ಖಲಿತಂ ಕೇಕಿನರ್ತನಂ ।
[ಜಳದಾಗಮದಿಂ ಚಿತ್ತ ಸ್ಖಲಿತಂ ಕೇಕಿನರ್ತನಂ ॥] ೧೨೮॥

(ಇದು ಗೋಮೂತ್ರಿಕೆ)

ಇಂ ಯಮಕಚಕ್ರಂ.

ಯಮಕಂ (ಪ)ದಪಾದಾರ್ಥ ಸಮಶ್ಲೋ(ಕಾದಿ)ಗೋಚರಂ ।
ಪ್ರಮಿತಾದ್ಯಂತದೂಷ್ಯೋಪಕ್ರಮಾನೇಕಪ್ರಕಲ್ಪಿತಂ ॥ ೧೨೯॥

ತಾರಾ ಜಾನಕಿಯಂ ಪೋಗಿ ತಾರಾತರಳನೇತ್ರೆಯಂ ॥
ತಾರಾಧಿಪತಿತೇಜಸ್ವಿ ತಾರಾದಿವಿಜಯೋದಯಾ ॥ ೧೩೦॥

ಕೞಿಪಂ ತಂದು ನಿಂಕಮಿಕ್ಕೞ್ತಿಪಂ ಕಳಿವಂ ಚಲ ।
ಕೞಿಪಂ ಕಂಜ ನೇತ್ರೇ. ಕೞಿವಂ ಬೞಿಕಾತನಂ ॥ ೧೩೧॥

ಬಾರುದಾರುಣನಂ ದಾನವಾರಿವಾರಿತಲೋಕನಂ ।
ಬಾರ ಬಾರಣಮಂ ನೋಡಾ ಸಾರಾಸಾರಾಂಬುದಾಭಮಂ ॥ ೧೩೨॥

ಸಾರಸಾರಸನಾದಾಮಸಾರಸಾರಾನಿತಂಬೆಯಂ ।
ತಾರಾತಾರಾತರಂಗಾಭಾಕಾರತಾರಮಣೀಯೆಯಂ ॥ ೧೩೩॥

ಅಜೇಯಂ ಪೋಲ್ಕುಮಾಮತ್ತಗಜಂ ವಾರಿಜನಾಭನಂ ।
ತ್ರಿಜಗನ್ಮಾದನಂ ಮತ್ತಂ ನಿಜನೀಳಘನಾಭನಂ ॥ ೧೩೪॥

ಲೋಕವೈದಿಕಸಾಮ್ಯೈಕ ಲೋಕನಾಕಾರಕಾರಕಾ ।
ನಾಕಿ ನೂತಪದವ್ಯಕ್ತಿ ಶ್ರೀಕಾಂತಾ ಕಾಮಕಾಮದಾ ॥ ೧೩೫॥

ವಾರಿ ವಾರಿಯೊಳಾದಾನಂ ವಾರಿವಾರಿ ವಿತರ್ಕಮಂ ।
ವಾರಿವಾರಿ ಜವೋದಾನಂ ವಾರಿವಾರಿಜನಾಭನೊಳ್ ॥ ೧೩೬॥

ವರವಾರನಾರಿಯೊಳ್ ನೆರೆದೆವಾನೆಲ್ಲಿ ನಿನಿದೆ ।
ಪರವಾರವಾರಿಯೊಳ್ ನೆರೆದೆನಾನೆಲ್ಲಿ ನೀಂ ॥
ಪರದಂತರಿಪುದು ವರಿಂತರಿಯ ನೆಲ್ಲಂ ।
ಪುರಿದು ಮಾಱಿದೆ ಕಾಣದ ತಿರಿಸುಂಗಡಿಯೊಳ್ ॥ ೧೩೭॥

(ಇದು ಸರ್ವಯಮಕಂ)

ತಿಳಿಗೊಳನಂ ಪೂಗೊಳವನದಂ ನೆಗಱ್ದೆ |
ಮುಳಿವುಕೊಳ್ವ ಬಳಸೆ ನಾನದಂ ನೆ ||
ಗಳೆ ತಾನೆಡೆಮನಂಗಜನೆ ರಪ್ಪಲಾ |
ಗದೆ ನಂಬವನದೊಪ್ಪವಂ ವನೇಚರನುದಾ || ೧೩೮||

ನರಬಾರಪರಾನೋನೇ ನರದಾರೇನರಾರನಾ |
ಅರಿದಯ್ತಿಂಪವಡಾರಿಕ್ಕುಂ ಪರಿಬಾನ ಪರಾಧಿಯೇ || ೧೩೯||

(ಇದು ಅರ್ಧಭ್ರಮಣಂ)

ವರದಾರಪರಾಬಾನ್ಯಂ ಪರಿಬಾನಪರಾದವುಂ |
ನೆರೆದೇವದಿರಾಜನ್ಯಂ ಪರಿಗೋನರರಾದವುಂ || ೧೪೦||

(ಇದು ಮುರಜಬಂಧಂ)

ಅರಸಿಯ ದಿವ್ಯಸೇನಾದರದಿರದೀಗಡೆ ನಿಂ |
ನರಸಿಯನೆಯ್ದುವಿನಂ ಪರಿಜನಮುಂ ಕಳಿಪಿಂ || ೧೪೧||

(ಇದು ಕ್ರಿಯಾಗೋಪಕಂ)

ಸಂತಂ ಬಾೞ್ವುದು ವಿೂಜಬಾನರಪನೊಳ್ ಸೌಜನ್ಯಲಕ್ಷ್ಮೀಮಧಾಂ |
ಥಂ ತನ್ನಿಶ್ಚಯಮುಚ್ಚಿ ನಿಂ ಪರಗುಣಾಪಾರ್ಯಾಭಿಮಾನಂಗಳಿಂ ||
ಪಿಂತಂ ನೋಡದೆ ಪಾಱಿಗೆಟ್ಟುಱಿಪಿನಿಂ ಬಾೞ್ವಂತೆ ಬಾೞ್ದಯ್ಯನಾ |
ಸಂತಂ ತಾಂ ಪಸತಂದನಱ್ತಿ ಪೞುಗುಂ ದಾನಂಗಳುಂ ಭೂಪನಾ||೧೪೨||

(ಇದು ಚಕ್ರಶ್ಲೋಕಂ)

ಹೇಳಿಕಾದಿಗಳ್.

ಗೀತಿಕೆ|| ಅನುಗತಂ ಪೂರ್ವಕವಿಗಳ್ |
ನೆನೆದಿಂನುಂ ಪೇೞ್ದಿಂ ದುಷ್ಕರೋಕ್ತಿಯಂ ||
ನನುಗತಕ್ರಮದೆ ಬಗೆದು ಹೇಳಿಕೆಯೊ[ಳ್] |
ಜನಿತವಿಭೇದಮುಮಂ ಪೇೞ್ವೆಂ ಕಿಱಿದಂ || ೧೪೩||

ಹೇಳಿಕೆಗಳ ಪೆಸರ್.

ಗೀತಿಗೆ॥ ಭಾವೆಯುಂ ನುಸುಳುಮಸ್ಪಷ್ಟಾಕ್ಷರಮು ।
ಮಾವರ್ಣವ್ಯತ್ಯಯಮುಂ ಬಿಂದುಚ್ಯುತಿಯುಂ ॥
ಭಾವಿಸಿ ದೊರ್ನುಡಿಯುಂ ವರ್ಣಚ್ಯುತಮುಂ ।
ಕೇವಲಮುವಱ ಭೇದಮುಂ ಸುಸಮಸ್ತಕಮಂ ॥ ೧೪೪॥

ಸವಿಹಿತಮಪ್ಪ ಕರ್ಣಪೂರೋತ್ಪಲಮಂ ।
ಧವಳವಿಲೋಚನೆಯ ಗುಣಸುಂದರಮಂ ॥
ಕಿವಿವರಂ ನೀಱ್ದು ನಯನಯುಗದೊಳೊ ।
ಪ್ಪುವವಳಾನವಯವದೇಕೆ ಕಳೆಯವೇೞ್ದಿಂ ಪ್ರಿಯೆಯಂ ॥ ೧೪೫॥
(ಇದು ಭಾವೆ)

ತಿರಿವುದದೊಂದು ಚಕ್ರದೊಳೆ ನಿಂದುದಿವಾ ।
ಕರನೆ ಮತ್ತಱಿದು ಕಳಿಪೊಡಂತದ ನಾವೆಡೆಯಿಂ ॥
ದರೆಯಮೆಯೊರಿ ನೆಲಸಿ ಕೆಲಕಾಲದಿ ।
ಪೆರೆದಿರದೞಿದ ಬೞಿಕೆ ತಾ ನೆಲದೊಳ್ ॥ ೧೪೬॥
(ಇದು ನುಸುಳ್)

ನೆಟ್ಟನೆ ತಾಂ ಸವಿಯೊಳೊಂದಿರೆ ಭೋಜನಮಾ ।
ನಟ್ಟು ಬಡ್ಡಿಸು ನಾಮಱಿಯದೆನಸುಂ ಸವಿಯಂ ॥
ಪುಟ್ಟದಾಱುಮಱಿಯದದಱ ಪೆಸರೊ ।
ಳುಟ್ಟುದಂ ಪೇೞಿ ಕೇಳ್ದಱಿಯೆಂ ॥ ೧೪೭॥
(ಇದು ಅಸ್ಪಷ್ಟಾಕ್ಷರಂ)

ಅವನಾಮುಕಳ್ವಕ್ಷ ಚಯಂ ।
ಕ್ರವನೊಚರಾವಾಯು ದಷ್ಟ್ಯಾಸಾಯುಬೆಗಳೊಳ್ ॥
ಸೆವಿಸೆವಮಲಹೈವಸುಮುಕ್ತಿಮಹಾ ।
ದೇವ ನಿನನ್ನನನಪ್ಪೊನಸಹಾಯುಗುಣಂ ॥ ೧೪೮॥
(ಇದು ವರ್ಣವ್ಯತ್ಯಯಂ)

**ಗೀತಿಗೆ**|| ಸೊಗಯಿಸುಗು ಮಿಂದ್ರನೀಲಮಣಿಸನ್ನಿಭದೊಳ್ |
ಮಿಗೆ ಜಳನಿಧಿಯೊಳಗುದಿತದಿಂದಿರವವೊಲ್ ||
ನೆಗೆದತಿಧವಳಮೂರ್ತಿಗೆ ಘನವಳಯಸದಗ್ಧ |
(ಗಗನ)ದೊಳುಜ್ಜಃದುಬಿಸಿದು ವಿಶಾಲಿತಾಶಾವಳಯಂ || ೧೪೯||

(ಇದು ಬಿಂದುಚ್ಯುತಕಂ)

ಆವುದು ಬಾಗಿದುದುಮಧಿಕಂ ಬಸನಂ |
ಕೇವಲಮಾಗೆ ನೆಗೆವುದುಚಿತಾವಯವಂ ||
ದೀವದಿಂ ನಿಂದು ಸಿತಗನಂ ನುಡಿದುವು |
ಭಾವಿಸೆ ಬಗೆಗೊಳದಾರಕೊರ್ಣದಿಯುಂ || ೧೫೦||

(ಇದು ಪೊಳ್ನುಡಿ)

ತಳಮಳಗುತ್ತುಂ ಜನಿತನಿಜಭೀತಿ ಮನಂ |
ಗೊಳೆ ಕಳವಳಿಸಿ ಚಲಿತ ನಿಲವಣ್ಮದೆಮೆ ||
ಕ್ಕಳವೊಳಗೆ ಸುಬಿದರರಸಂ ಮನದೊಳ್ |
ಮುಳಿದಸಿಯುನೆ ನೋಡಿ ಪರಿವಾರದವರ್ || ೧೫೧||

(ಇದು ವರ್ಣಚ್ಯುತಕಂ)

ವಿಗಳಿತಗಾಗನಾವೂ ನಿಂನಾ ವುದಱ |
ಸೊಗಯಿಸುಗುಂ ಕಟಕತ್ಸಮುಂ ಸಮರ್ಥಬಲಂ ||
ಬಗೆದೆನಗೊಯ್ಯನೆಸೆಗೆಯ್ದು ಒದಾ |
ಲಗ (ಲ)ಲಾಟಸುಗು ಮದೆ ಪೇಟಿಸ್ಟಿಂ ಬನದೊಳ್ || ೧೫೨||

(ಇದು **ಸಮಂತಿ**)

ಪುಷ್ಪಿತಾಗ್ರಾ|| **ಅತಿಶಯಧವಳೋ** (ಪಿಸ್ಪ್ರೋಕ್ತ)ಮಾಗೊರ್ಣೇ |
ಚಿತಗತಿಭಾವಿತಮಾರ್ಗಳಂಕ್ರಿಯಾರ್ಥಂ ||
ಚತುರಕವಿಜನಾನುಯಾತಸಾರ |
ಸ್ಮತಗುಣಪೊಳ್ ಬಗೆವಂತ್ರ ಕೂಡಲಾಕರ್ಣಂ || ೧೫೩||

ಮಾಲಿನೀ||—ಬುಧಗುಣಗಣನಾತ್ರೀತಾಂತರಂ ಶಬ್ದ(ತ)ತ್ತ್ವಂ.|
ಬುಧವಿವಿಧವಿಧಾನಾಳಂಕ್ರಿಯಾವೀಧಿ ಮಾಳಿ ||
ವಿಧುರಗತಿ ವಿಲೋಢ್ಯಂ ತಳ್ತು ನಿಲ್ತಪ್ಪುದಾವಾ |
ಗಧಿಪವಚನಮಾಲಾಪಾವನೀಯಂ ಗಭೇತಂ || ೧೫೪||

ಉ|| ಭಾವಿಸಿ ಶಬ್ದತತ್ವ ಸಮಯಸ್ಥಿತಿಯಂ ಕುಱಿಕೊಂಡಶೇಷಭಾ |
ಷಾವಿಷಯೋಕ್ತಿಯಂ ಬಗೆದು ನೋಡಿ ಪುರಾಣಕವಿಪ್ರಭುಪ್ರಯೋ ||
ಗಾವಿಲ ಸದ್ಗುಣೋದಯಮ ನಾಯ್ದುವಱಿಂ ಸಮೆದೊಂದುಕಾವ್ಯದಿಂ |
ಶ್ರೀವಿಜಯಪ್ರಭೂತಮುದಮಂ ತನಗಾಗಿಸಿದೊಂ ಕ[ವೀಶ್ವರಂ] || ೧೫೫||

## ಗದ್ಯ

ಇದು

ಶ್ರೀ ಪರಮ ಶ್ರೀ ನೃಪತುಂಗ ದೇವಾನುಮತ

ಮಪ್ಪ

ಕ ವಿ ರಾ ಜ ಮಾ ರ್ಗ ದೊ ಳ್ ||

ಶಬ್ದಾಲಂಕಾರವರ್ಣನನಿರ್ಣಯಂ

ದ್ವಿತೀಯಪರಿಚ್ಛೇದಂ

5016

ಶ್ರೀ

# ತೃತೀಯಪರಿಚ್ಛೇದಂ.

## ಅರ್ಥಾಲಂಕಾರ ಪ್ರಕರಣಂ.

---

ಕ॥ ಶ್ರೀವಿದಿತಾರ್ಥಾಲಂಕಾ।
ರಾವಳಿಯಂ ವಿವಿಧಭೇದವಿಭವಾಸ್ಪದಮಂ ॥
ಭಾವಿಸಿ ಬೆಸಸಿದನಖಿಳಧ।
ರಾವಲ್ಲಭನಿಂತಮೋಘವರ್ಷ ನೃಪೇಂದ್ರಂ ॥ ೧॥

### ಅರ್ಥಾಲಂಕಾರನಾಮಂಗಳ್.

ವರಜಾತಿರೂಪಕಾರ್ಥಾಂ।
ತರವಿನ್ಯಾಸಾತಿರೇಕಯಾಥಾಸಂಖ್ಯಾ ॥
ಸ್ಥಿರದೀಪಕೋಪಮಾಬಂ।
ಧುರಾತಿಶಯಸದೃಶಯೋಗಿತಾಕ್ಷೇಪಂಗಳ್ ॥ ೨॥

ಶ್ಲೇಷೋತ್ಪ್ರೇಕ್ಷಾಸೂಕ್ಷ್ಮವಿ।
ಶೇಷಸಮಾಹಿತಸಮಾಸಪರ್ಯಾಯೋಕ್ತಾ ॥
ನ್ವೇಷವಿರೋಧಾಪ್ರಸ್ತುತ।
ಶೇಷನಿದರ್ಶನಸಹೋಕ್ತಿಸಂಕೀರ್ಣಂಗಳ್ ॥ ೩॥

ನುತಪರಿವೃತ್ತಿವ್ಯಾಜ।
ಸ್ತುತಿಹೇತುವಿಭಾವನಾಲವೋದಾತ್ತಾಪ ॥
ಹ್ನುತಿರಸವದೂರ್ಜಿತವ್ಯಾ।
ವೃತಿಪ್ರಿಯತರಾತಿಗಳ್ ಕ್ರಮಾದ್ಯುಕ್ತಂಗಳ್ ॥ ೪॥

ವಿದಿತಾರ್ಥಾಲಂಕಾರಾ।
ಸ್ಪದಭೇದಂಗಳ್ ಪುರಾಣ ಶಾಸ್ತ್ರೋಕ್ತಂಗಳ್॥
ತದನುಮತಲಕ್ಷ್ಯಲಕ್ಷಣ।
ನಿದರ್ಶನಂಗಳನನುಕ್ರಮೋಕ್ತಿಯೆ ಪೇೞ್ವೆಂ॥ ೫॥

(೧) ಜಾತ್ಯಲಂಕಾರಲಕ್ಷಣಂ.

ಭಾವಿಸಿ ಸಮಸ್ತವಸ್ತುವಿ।
ಭಾವಿತಜಾತಿಕ್ರಿಯಾಗುಣದ್ರವ್ಯಸ್ವ॥
ಭಾವಿಕಗುಣಮಂ ಪೇೞ್ವುದು।
ಕೇವಲಮಾ ಜಾತಿಯೆಂಬ ಸದಳಂಕಾರಂ॥ ೬॥

(ಜಾತಿ)

ಜಾತ್ಯಲಂಕಾರಲಕ್ಷ್ಯಂಗಳ್.

ಕಂ॥ ಧವಳಾಪಾಂಗಂ ಕೇಕಾ।
ರವಮುಖರಂ ಹರಿತಶಾಬಲಾಂಕಕಳಾಪಂ॥
ನವಿಲಾದಂ ಸೊಗಯಿಸುಗುಂ।
ಸುವಿನೀಲಾಯತಗಳಂ ಪಯೋದಾಗಮದೊಳ್॥ ೭॥

(ಜಾತಿಸ್ವಭಾವಾಖ್ಯಾನಂ)

ಅರೆಮುಚ್ಚಿ ಕಣ್ಗಳಂ ವನ।
ಕರಿ ಮೆಲ್ಲದೆ ಲಲಿತಸಲ್ಲಕೀಪಲ್ಲವಮಂ॥
ಸ್ಮರವಶದಿಂದಿರ್ದುದು ನಿಜ।
ಕರೇಣುಪೇಚಕನಿರೂಪಿತಾಯತಹಸ್ತಂ॥ ೮॥

(ಕ್ರಿಯಾಸ್ವಭಾವಾಖ್ಯಾನಂ)

ಆವಿೞನಮಂ ಕಣ್ಗಳೊ।
ಳಾಮನದೊಳಗೊಸಗೆಯಂ ಶರೀರದೊಳೆತ್ತಂ॥
ರೋಮಾಂಚಕಂಚುವಂ ಮಾಡಿ।
ರಾಮದವಾಗಿಸೆ ತೆಗೞ್ಪಿನಾಕೆಯ ನುಡಿಯೊಳ್॥ ೯॥

(ಗುಣಸ್ವಭಾವಾಖ್ಯಾನಂ)

ತಳವಿತಮಧ್ಯೆಯನಾಯತ।
ವಿಳೋಳಲೋಚನೆಯನುನ್ನತಸ್ತನಯುಗೆಯಂ॥
ಲಳಿತವಿಳಾಸಿನಿಯಂ ಕೋ।
ಮಳಾಂಗಿಯಂ ಪೃಥುಸಿತಂಬಬಿಂಬೆಯನುಱಿಪಂ॥ ೧೦॥

(ದ್ರವ್ಯಸ್ವಭಾವಾಖ್ಯಾನಂ)

ಉಪಸಂಹೃತಿ---ಅವತರಣಿಕೆ.

ಅತಿ (ಶಯು) ಧವಳಧರಾಧಿಪ।
ಮತದಿಂ ಜಾತಿಯೆಂಬಳಂಕಾರಮನಿಂ॥
ತತಿನಿಪುಣರಱಿಗೆ ತೋರ್ಪೆಂ।
ಶ್ರುತಿಸುಭಗಮೆನಿಪ್ಪ ರೂಪಕಾಲಂಕೃತಿಯಂ॥ ೧೧॥

(ಇಂತು ಜಾತ್ಯಲಂಕಾರಂ)

(೨) ರೂಪಕಸಾಮಾನ್ಯಲಕ್ಷಣ ಲಕ್ಷ್ಯಂಗಳ್.

ರೂಪಕಮೆಂಬುದು ಪೆಱವರ।
ರೂಪಾದಿಗುಣಂಗಳಾನಭೇದೋಕ್ತಿಗಳಿಂ॥
ರೂಪಿಸುವುದಿಂತು ಬಾಹುಲ।
ತಾಪಾಪಾಂಬುಜಮುಖೀಂಬುನಯನಾಳಿಗಳಿಂ॥ ೧೨॥

(ರೂಪಕಂ)

ರೂಪಕಭೇದ ಲಕ್ಷ್ಯಂಗಳ್.

ಸ್ಮಿತಕುಸುಮಮಧರಪಲ್ಲವ।
ಮತಿಶಯನಯನಾಳಿ ಬಾಹುಶಾಖಂ ಕಾಂತಾ॥
ಲತೆ ಯೆಂದಿಂತು ಸಮಸ್ತಾ।
ಶ್ರಿತಂ ಸಮಸ್ತಂ ಸಮಸ್ತರೂಪಕಮುಕ್ತಂ॥ ೧೩॥

(ಸಮಸ್ತರೂಪಕಂ)

ಕಂ॥ ಕುಸುಮಂ ಸ್ಮಿತಮಳಿ ನಯನಂ।
ಕಿಸಲಯಮಧರಂ ಭುಜದ್ವಯಂ ವಿಟಪಂ ಮ॥
ತ್ತುಸುವಲ್ಲಭೆ ಲತೆಯೆಂಬುದಿ।
ದ ಸಮಸ್ತಂ ವ್ಯಸ್ತರೂಪಕಕ್ರಮಮಖಿಲಂ॥ ೧೪॥

(ವ್ಯಸ್ತರೂಪಕಂ)

ಸ್ಫುರಿತಾಧರಪಲ್ಲವೆ ಬಂ।
ಧುರಲೋಚನಕುಸುಮೆ ಲೋಲಭುಜಶಾಖೆ ಮನೋ ॥
ಹರೆ ಕಾಂತೆ ಯೆಂಬುದವಯವ।
ನಿರೂಪಣಕ್ರಮದಿ ನವಯವಂ ರೂಪಕದೊಳ್ ॥ ೧೫॥

(ಸಾವಯವರೂಪಕಂ)

ತರಳತರಲೋಚನಂ ನಿ।
ರ್ಭರರಾಗರಸಂ ಮುಖಾರವಿಂದಂ ನಿನ್ನಾ ॥
ದೊರೆಕೊಳಿಸಿದೊಸಗೆಯಂ ಬಂ।
ಧುರಮೆಂಬುದಿದವಯವಿಕ್ರಮಂ ರೂಪಕದೊಳ್ ॥ ೧೬॥

(ಅವಯವಿರೂಪಕಂ)

ಮೃದುತರಕಪೋಲಫಲಕಂ।
ವದನಾಂಬುಜಮಾಯತೋನ್ನತಭ್ರೂಚಾಪಂ ॥
ಮುದಮಂ ಪಡೆದತ್ತೆನಗೆಂ।
ಬುದು ವಿಷಮಿತರೂಪವಿಷಮರೂಪಕಮಕ್ಕುಂ ॥ ೧೭॥

(ವಿಷಮರೂಪಕಂ)

ಜಿನಚರಣನಖಾದರ್ಶಂ।
ವಿನತಾಮರರಾಜರಾಜವದನಪ್ರತಿಮಂ ॥
ಮನದೊಳ್ ಸಲೆ ನಿಲ್ಕೆಂಬುದು।
ವಿನಿಶ್ಚಿತ ವಿಶೇಷಣೋರುರೂಪಕಮಕ್ಕುಂ ॥ ೧೮॥

(ವಿಶೇಷಣ ರೂಪಕಂ)

ಕಮಲಾಕರದೊಳ್ ಸಂಕೋ।
ಚಮನಟಿಲಂ ಚಕ್ರವಾಕದೊಳ್ ಮಾಡದು ನಿ ॥
ನ್ನ ಮುಖೇಂದುಬಿಂಬಮಿಂದುಗೆ।
ಸಮನೆಂಬುದು ಮಿಗೆ ವಿರುದ್ಧರೂಪಕ ಮಕ್ಕುಂ ॥ ೧೯॥

(ವಿರುದ್ಧರೂಪಕಂ)

ಕುಲಗಿರಿಯೈ ಗೌರವದಿಂ |
ನೆಲನೈ ಸ್ಥೈರಣೆಯಿನಿಂದುವೈ ಕಾಂತಿಯಿ ನಾ ||
ಜಲನಿಧಿಯೈ ಗುಣ್ಪಿಂದೆಂ |
ದಲಸದೆ ಪೇೞ್ಗಿಂತು ಹೇತುರೂಪಕ ವಿಧಿಯಂ || ೨೦||

(ಹೇತುರೂಪಕಂ)

ಕಂ|| ಕುಮುದಾನಂದನಕರವತಿ |
ಕಮಲಾಕರರಾಗಹರಮುದಾರಂ ನಿನ್ನಾ ||
ವಿಮಳಯಶೋವಿಧು ವೆಂಬುದು |
ಕಮಸೇಯುಶ್ಲಿಷ್ಟರೂಪಕಾಲಂಕಾರಂ || ೨೧||

(ಶ್ಲಿಷ್ಟರೂಪಕಂ)

ಪರಿಚಿತಸನಾಭಿರಾಗಾಂ |
ಕುರಜಲಸೇಚಂ ವಿರೋಧಿತರುದವದಹನಂ ||
ಪರವೋದಯರವಿಗಗನಂ |
ಪರಾಕ್ರಮನವದೆನೆ ವಿಭಿನ್ನರೂಪಕ ಮಕ್ಕುಂ || ೨೨||

(ವಿಭಿನ್ನರೂಪಕಂ)

ವದನಾಂಬುಜರಂಗದೊಳೀ |
ಮದಾಲಸಭ್ರೂಲತಾವಿಲಾಸಿನಿ ಲೀಲಾ ||
ಸ್ಪದನೃತ್ಯಮನಾಗಿಸಿ ದ |
ಪ್ಪುಡಿದೆಂಬುದು ರೂಪಕೋರುರೂಪಕಮಕ್ಕುಂ || ೨೩||

(ರೂಪಕರೂಪಕಂ)

ವದನವಿದಲ್ತಂಬುರುಹಂ |
ಮದಲೋಲವಿಲೋಚನಂಗಳಲ್ಲವಿವಳಿಗಳ್ ||
ನುದಮಲ್ಲಿದು ವಿಕಸನಮೆಂ |
ಬಿದನಿಂಬಿನೆ ಬಗೆಗೆ ರೂಪಕಾಪಹ್ನುತಿಯಂ || ೨೪||

(ರೂಪಕಾಪಹ್ನುತಿ)

ಮೊಗಮೆಂಬಂಬುಜದಲರಾ ।
ನಗೆಯೆಂಬ ವಿಕಾಸನೊಪ್ಪುವದಱೞೊಳ್ ಸುೞಿಗುಂ ॥
ಮಿಗೆ ಕಣ್ಗಳೆಂಬ ತುಂಬಿಗ ।
ಳೊಗೆ ದೊಸಗೆಯಿನೆನೆ ಸುಯುಕ್ತರೂಪಕಮಕ್ಕುಂ ॥ ೨೫॥

(ಯುಕ್ತರೂಪಕಂ)

ನಗೆಯೆಂಬ ನೆವದೆ ಬೆಳಗಿನ ।
ಮೊಗಮೆಂಬೀ ನೆವದೆ ತಿಂಗಳೊಳಗೆಸೆದಾದಂ ॥
ಸೊಗಯಿಸಿ ತೋರ್ಕುಂ ಲೋಚನ ।
ಯುಗಮೆಂಬೀನೆವದೆ ಲಕ್ಷ್ಮಮೆಸೆ ತದ್ವ್ಯಾಜಂ ॥ ೨೬॥

(ವ್ಯಾಜರೂಪಕಂ)

ಉಪಸಂಹೃತಿ—ಅವತರಣಿಕೆ.

ವರರೂಪಕ ಭೇದಮನಿಂ ।
ತಿರೆ ಪೇೞ್ದೆಂ ಕಿಱಿದನುೞಿದುದಂ ಲಕ್ಷ್ಯದೊಳಾ ॥
ದರದಱಿಗೆ ತೋರ್ಪೆನರ್ಥಾಂ ।
ತರವಿನ್ಯಾಸಕ್ಕೆ ಲಕ್ಷ್ಯಲಕ್ಷಣಯುಗಮಂ ॥ ೨೭॥

(ಇಂತುರೂಪಕಂ)

(೩) ಅರ್ಥಾಂತರನ್ಯಾಸಾಲಂಕಾರಲಕ್ಷಣಂ.

ಕ॥ ದೊರೆಕೊಳೆ ಪೇೞ್ದರ್ಥಮನಾ ।
ದರದಿಂ ಸಾಧಿಸಲೆ ವೇಡಿ ಪೆಱತೊಂದರ್ಥಾಂ ॥
ತರಮಂ ಪೇೞ್ವುದದರ್ಥಾಂ ।
ತರವಿನ್ಯಾಸಾಖ್ಯಮದಱದೀ ಭೇದಂಗಳ್ ॥ ೨೮॥

ಅರ್ಥಾಂತರನ್ಯಾಸಾಲಂಕಾರಭೇದಂಗಳ್.

ಸಕಲವ್ಯಾಪಿ, ವಿಶೇಷ ।
ಪ್ರಕಾಶಕಂ, ಯುಕ್ತಕಾರಿ, ಯುಕ್ತಾಯುಕ್ತಂ ॥
ಪ್ರಕಟಶ್ಲೇಷ, ವಿರುದ್ಧಾ ।
ತ್ಮಕಂ, ವಿರುದ್ಧಂ, ವಿಪರ್ಯಯಂ, ಯುಕ್ತಾರ್ಥಂ ॥ ೨೯॥

ಲಕ್ಷ್ಯಂಗಳ್.

ಸತತೋದಯ ನಪ್ರತಿಹತ ।
ಗತಿ ತೀವ್ರಂ ತದ್ದಿನಾಧಿನಾಥನುಮಸ್ತಂ ॥
ಗತನಾದನಂತೆ ನಿಯತ ।
ಪ್ರತೀತಿಯಂ ಕಳೆಯಲಕ್ಕುಮೇ ವ್ಯಾಪಕನುಂ ॥ ೩೦॥

(ವ್ಯಾಪಕಾರ್ಥಾಂತರನ್ಯಾಸಂ)
(ಸಕಲವ್ಯಾಪಿ)

ಸರಸಿಜಬಾಂಧವನಸ್ತಂ ।
ತರಗತನಾಗಿರೆ ಸರೋಜಿಸೀವನಮಾದಂ ॥
ಕೊರಗುತ್ತೆ ಮುಗಿಗುವಿೂಶ್ವರ ।
ವಿರಹದೆ ಶೋಕಾಕುಲಂ ವಿಶೇಷಾಪ್ತಜನಂ ॥ ೩೧॥

(ವಿಶೇಷಾರ್ಥಾಂತರನ್ಯಾಸಂ)
(ವಿಶೇಷಪ್ರಕಾಶಕಂ)

ಮಲಯಾನಿಲನುಂ ಮಲಯಜ ।
ಜಲಮುಂ ಶತಿಕಿರಣಮುಂ ವಿಯೋಗಿಗಳೆರ್ದೆಯೊಳ್ ॥
ನೆಲಸಿದುರ್ವಱಲೆ ಪಾಪದ ।
ಫಲಮಾದುವು ಯುಕ್ತಕಾರಿ ಕಾಮುಕ ಜನದಾ ॥ ೩೨॥

(ಯುಕ್ತಕಾರ್ಯರ್ಥಾಂತರನ್ಯಾಸಂ)

ಹರಿಣಧರಂ ಸೊಗಯಿಸಿದಂ ।
ತಿರೆ ಕುಸುಮಿತಚೂತವಿತತಿ ಸೊಗಯಿಸಿತೆನಸುಂ ॥
ಸುರಭಿ ಸುಮನಸ್ವಿ ದೋಷಾ ।
ಕರವಿಲಸಿತಮಪ್ಪುಡಿಂತು ಯುಕ್ತಾಯುಕ್ತಂ ॥ ೩೩॥

(ಯುಕ್ತಾಯುಕ್ತಾರ್ಥಾಂತರನ್ಯಾಸಂ)

ದಿನನಾಯಕ ನಪರದಿಗಂ ।
ಗನೆಯೊಳ್ ನೆರೆದುದಿತರಾಗನಾದಂ ಪೀನಂ ॥
ಜನಿಯಿಸುಗುಮಧಿಕರಾಗಮ ।
ನೆನಸುಮುಪಕ್ರಮದೆ ವಾರುಣೀಸಂಶ್ಲೇಷಂ ॥ ೩೪॥

(ಶ್ಲೇಷಾರ್ಥಾಂತರನ್ಯಾಸಂ)

ಕಂ|| ಸರಿದಧಿಪತಿಯಂ ದೋಷಾ |
ಕರನಂತರ್ಮಲಿನನಾಗಿಯುಂ ಪೆರ್ಚಿಸುಗುಂ ||
ಪರಿಣತಕಲಾಕಲಾಪಂ |
ಪರಿವರ್ಧಕನಕ್ಕು ಮತಿವಿರುದ್ಧಾರ್ಥಕಮುಂ || ೩೫||

(ವಿರುದಾರ್ಥಕಾರ್ಥಾಂತರನ್ಯಾಸಂ)

ಪರಿತಾಪಮನೆನಗೆ ನಿಶಾ |
ಕರನಾಗಿಸುಗುಂ ವಸಂತಸಮಯಾನುಗತಂ ||
ಸುರಭಿಸಮಯೋದಿತಂ ಹಿಮ |
ಕರನಲಿಲಂ ಪಡೆವನೆಂಬುದಿದು ವಿಪರೀತಂ || ೩೬||

(ವಿಪರೀತಾರ್ಥಾಂತರನ್ಯಾಸಂ)
[ವಿಪರ್ಯಯಾರ್ಥಾಂತರನ್ಯಾಸಂ]

ಉರಿಪಿತ್ತಶೋಕಪಲ್ಲವ |
ವಿರಚಿತಶಯನೀಯಮೆನ್ನ ಮೆಯ್ಯಂ ಪೀನಂ ||
ಸ್ಫುರದನಲಪ್ರತಿನಿಧಿ ತ |
ತ್ಸ್ವರೂಪಗುಣಮಕ್ಕುಮೆಂಬುದೆಂದುಂ ಯುಕ್ತಂ || ೩೭||

(ಯುಕ್ತಾರ್ಥಾಂತರನ್ಯಾಸಂ)
(ಇಂತು ಅರ್ಥಾಂತರನ್ಯಾಸಂ)

ಉಪಸಂಹೃತಿ—ಅವತರಣಿಕೆ.

ಸಂತತವಿಂತೆಸೆವಪ್ಪ |
ರ್ಥಾಂತರವಿನ್ಯಾಸಭೇದಮಂ ಬಗೆಗೆ ಬುಧರ್ ||
ಮುಂತಣಲಕ್ಷಣಲಕ್ಷ್ಯಯು |
ಗಾಂತರ್ಗತಭೇದಮಕ್ಕುಮಾವ್ಯತಿರೇಕಂ || ೩೮||

(೪) ವ್ಯತಿರೇಕಂ.

ಆದಿಪ್ರತೀತಿಯಂ ಶ |
ಬ್ದಾ(ದ)ರದಿಂ ಸದೃಶಮಾದ ವಸ್ತುದ್ವಯದೊಳ್ ||
ಭೇದಮನ ನಱಿಪುವುದುಚಿತಗು |
ಣೋದಯಕೃತವಾಕ್ಯವಿಸ್ತರಂ ವ್ಯತಿರೇಕಂ || ೩೯||

ಲಕ್ಷ್ಯಂಗಳ್.

ಶ್ರೀವನಿತಾಪ್ರಸವದಿನಾ |
ಲಾವಣ್ಯಧನತಿಗಭೀರಭಾವದೆ ನೀನಿಂ ||
ತಾ ವಾರಿಧಿಯುಂ ಪೋಲ್ತ್ರ |
ಕೇವಲಭೇದಂ ದ್ವಿತೀ ಯಲಲಿತಾಕಾರಂ || ೪೦||

(ಏಕವ್ಯತಿರೇಕಂ)

ಪರವೋದಯರಿರ್ ಕಮಲಾ |
ಕರಬೋಧಕರಿರ್ ದಿನೇಶನುಂ ನೀನುಂ ಭಾ ||
ಸ್ಕರನನಿಯತವೃತ್ತಕ್ರಮ |
ನರಸಾ ನಿನ್ನಂತೆ ನಿಯತವೃತ್ತಸ್ಥಿತನೇ || ೪೧||

(ಉಭಯವ್ಯತಿರೇಕಂ)

ಕಂ|| ಪರಿಣತಗುಣರಿರ್ ಕಾಂತೋ |
ತ್ಕರರಿರ್ ನಿಜಸೌಖ್ಯರಿರ್ ನಿಶಾನಾಯಕನುಂ ||
ವರಪಾ ನೀನುಂ ದೋಷಾ |
ಕರನಾ ಶಶಿ ನೀನುದಾರಗುಣಸಮುದಯನೈ || ೪೨||

ಅಲಘುಭುಜನಾಗಿಯುಂ ನಿ |
ಶ್ಚಲನಾಗಿಯುಮಖಿಳಭೂಭೃದುತ್ತುಂಗತೆಯೊಳ್ ||
ನೆಲಸಿಯುಮೆಯ್ದದು ನಿನ್ನಾ |
ವಿಲಸಿತಮಂ ಮೇರು ಕಠಿನಭೋಗಾಧಾರಂ || ೪೩||

ಪಾರ್ಥಿವಗುಣಯುತಮಾಗಿಯು |
ಮರ್ಥಿತಫಲದಾಯಿಯಾಗಿಯುಂ ನಿನ್ನೊಳ್ ತಾಂ ||
ವ್ಯರ್ಥತೆಯಂ ಪಡೆಗುಂ ಪರ |
ಮಾರ್ಥವಚೇತನತೆಯಿಂದೆ ಕಲ್ಪಕುಜಾತಂ || ೪೪||

ಮದಮುದಿತಾಳಿಕದಂಬಂ |
ಮೃದುವಿಳಸಿತಸರಸಕೇಸರಂ ಸರಸಿರುಹಂ ||
ವದನಮಿದು ಲೋಲ ಲೋಚನ |
ಮುದಿತಂ ಸ್ಮಿತದಶನವಸನರಾಗೋಪಚಿತಂ || ೪೫||

ಶರದಂಬರಮುಂ ಮತ್ತೀ |
ಸರವರಮುಂ ವಿಳಸದತನುಧವಳಚ್ಛವಿಗಳ್ ||
ಹರಿಣಾಂಕಾಲಂಕೃತಮುಂ |
ಬರವಿಂಕೆೊಳಮುಚಿತರಾಜಹಂಸೋತ್ತಂಸಂ || ೪೬||

ಅಮದಾಲಸಲೋಚನಲೀ |
ಲಮುಪಾಸ್ತ ಭ್ರೂಲತಾವಿಲಾಸವಿಶೇಷಂ ||
ಕಮಲಮದು ಪೋಲದೀ ನಿ |
ನ್ನ ಮುಖಮನಿಂತೆತ್ತಮುಕ್ತಗುಣಭೂಷಣಮಂ || ೪೭||

ಅನಲನಸಾಧ್ಯಕಳಂಕಮು |
ಮನನಿಳತಪನೀಯದೂಳಿಯಾನಜಲಕ್ಷಾ ||
ಳನಮನನಾಕಲಶೋಷ್ಯಮು |
ನನಿಯತಕರ್ದಮಮನಯಶಮಂ ತೊಱೆಗಱಿವಂ || ೪೮||

(ಇಂತು ವ್ಯತೀರೇಕಂ)

ಉಪಸಂಹೃತಿ—(೫) ಯಥಾಸಂಖ್ಯಾಲಂಕಾರಲಕ್ಷಣಂ.

ಕಂ|| **ವ್ಯತಿರೇಕ** ವಿಕಲ್ಪಮನನು |
ಗತಕ್ರಮವಿಶೇಷಗುಣಕೃತಾಂತಮನಱಿಗೀ ||
ಮತದಿಂ **ಯಥಾಸಂಖ್ಯ** |
ಪ್ರತೀತಿಯುಂ ತೋರ್ಪನನ್ವಿತಾನ(ನ್ವಿ)ತಮಂ || ೪೯||

ಲಕ್ಷ್ಯಂಗಳ್.

ಅಳಿಕಾನನನಯನಂಗಳಿ ।
ನಳಿನಳಿನೋತ್ಪಳವಿಳಾಸಮಂ ಗೆಲ್ದುದಱಿಂ ॥
ಕಳಹಂಸಲೀಲಗಮನೇ ।
ಕೊಳನಂ ಸೀಂ ಪೋಲ್ತೆಯೆಂಬುದನುಗತಮಕ್ಕುಂ ॥ ೫೦॥
(ಯಾಥಾಸಂಖ್ಯಾನುಗತಂ)

ನಳಿನೋತ್ಪಳಾಳಿರುಚಿಗಳ ।
ನಳಕವಿಳೋಚನಮುಖಂಗಳೇಲ್ಕಳಿಗೊಳೆ ಸೀಂ ॥
ತಿಳಿಗೊಳನನೆ ಪೋಲ್ತಿರ್ದುದಂ ।
ತಿಳಿಯದುದೇಕೆಂಬುದಿಂತನನ್ವಯಮದಱೊಳ್ ॥ ೫೧॥
(ಯಾಥಾಸಂಖ್ಯವ್ಯತಿರೇಕಂ)
[ಇಂತು ಯಾಥಾಸಂಖ್ಯಂ]

ಉಪಸಂಹೃತಿ—ಅವತರಣಿಕೆ.

ನಿಗದಿತ **ಯಥಾಸಂಖ್ಯಾ** ।
ನುಗತವ್ಯತಿರೇಕಯುಗಳಲಕ್ಷ್ಯವಿವಕ್ಕುಂ ॥
ಬಗೆದಾ **ದೀಪಕದ** ವಿಭಾ ।
ಗಗತಿಯನೀಭೇದಲಕ್ಷ್ಯಲಕ್ಷಣಯುಗದಿಂ ॥ ೫೨॥

(೬) ದೀಪಕಾಲಂಕಾರಲಕ್ಷಣಂ.

ಜಾತಿಕ್ರಿಯಾಗುಣದ್ರ ।
ವ್ಯಾತಿಶಯವಿಶೇಷಿಯಪ್ಪ ಪದಮೊರ್ಬುಳಿಸಿಂ ॥
ದೀತೆಱದಿನುಱಿದ ಕಾವ್ಯದ ।
ಮೇತಿಗಮುಪಕಾರಿಯೋಗ್ಯ**ದೀಪಕ**ಮಕ್ಕುಂ ॥ ೫೩॥

ಲಕ್ಷ್ಯಂಗಳ್.

**ಮಲಯಾನಿಲನೊಯ್ಯನೆ ಪ** ।
**ಣ್ತೆಲೆಯಂ ನೆಲೆಯಿಂ ಕಳಲ್ಚುಗುಂ ವಿಟಪಿಗಳೊಳ್** ॥
ವಿಲಸಿತಕಳಿಕಾಕುಳಕೋ ।
**ಮಲಾಂಕುರಮನಂತೆ ಪಡೆಗುಮವಱಿಡೆಯಡೆಯೊಳ್** ॥ ೫೪॥
(ಜಾತ್ಯನುಗತಮಾದಿದೀಪಕಂ)

ತಿರಿತರ್ಕಮಮಳಜಳನಿಧಿ ।
ಪರಿಖಾವೃತಭೂವಿಭಾಗಮಂ ಭರದೆ ಜಳಾ ॥
ಕರವಿಕ್ಷೇಪಕಕಕುದಂ ।
ತರಮಂ ಸವಿಶೇಷರುಚಿರಸಂಭವವಿಧಿಯಂ ॥ ೫೫॥

(ಕ್ರಿಯಾನುಗತಮಾದಿದೀಪಕಂ)

ಕಂ॥ ವಿಶದತರಮಾಯ್ತು ಗುಣಮಣಿ ।
ವಿಶೇಷಭೂಷಣದಿನೀ ತ್ವದೀಯಾಕಾರಂ ॥
ಶಶಧರಕಿರಣಾಭಭವ ।
ದ್ಯಶೋವಿತಾನದಿನಶೇಷ ಮಾಶಾವಳಯಂ ॥ ೫೬ ॥

(ಗುಣಾನುಗತಮಾದಿದೀಪಕಂ)

ದಿವಸಕರನುದಯಗಿರಿಶಿಖ ।
ರವಿಶೇಷವಿಭೂಷಣಂ ತಮೋರಿಪುಬಳಮಂ ॥
ಪ್ರವಿಲೀನಂಮಾಡಿದನವ ।
ಯವದೊಳ್ ತಾರಾವಿತಾನತೇಜಮನೞಿದಂ ॥ ೫೭॥

(ದ್ರವ್ಯಾನುಗತಮಾದಿದೀಪಕಂ)

[ಇಂತು ದೀಪಕಂ]

ಉಪಸಂಹೃತಿ,

ದೀಪಕಮಾಜಾತ್ಯಾದಿನಿ ।
ರೂಪಕವಿಂತಕ್ಕುಮಾದಿಯೊಳ್ ಮಧ್ಯಾಂತ ॥
ವ್ಯಾಪಕಮನದಂ ತಱಿಸ ।
ಲ್ಗೀಪೇೞ್ದ ವಿಕಲ್ಪಲಕ್ಷ್ಯದೊಳ್ ಕವಿಮುಖ್ಯಂ ॥ ೫೮॥

(೭) ಉಪಮಾಲಂಕಾರಲಕ್ಷಣಂ.

ನಾನಾವಸ್ತುವಿಭೇದಮ ।
ನೇನಾನುಂ ತೆಱದೆ ಪೋಲ್ಕೆ ಮಾಡುವುದುಪಮಾ ॥
ಮಾನಿತಸದಲಂಕಾರಮ ।
ನೂನವಿಕಲ್ಪಪ್ರಪಂಚಮೀತೆಱನದಱಾ ॥ ೫೯॥

ಲಕ್ಷ್ಯಂಗಳ್.

ವನರುಹದಂತೆ ಮುಖಂ ಲೋ।
ಚನಮೆಸೆವುತ್ಪಳದವೋಲ್ ತಳಂ ತಳಿರಂತೆಂ ॥
ದನುರೂಪಮಾಗಿ ಪೇೞ್ದಿರ್ಪ್ಪ।
ಡೆನಸುಂ **ವಸ್ತೂಪಮಾನ** ಮೆಂಬುದು ಪೆಸರಿಂ ॥ ೬೦॥

(ವಸ್ತೂಪಮೆ)

ತಳಿರ್ಗಳವೋಲ್ ಮೆಲ್ಲಿದುವೀ ।
ತಳಂಗಳಳಿಕುಳದವೋಲ್ ವಿನೀಳಂಗಳ್ ನಿ ॥
ನ್ನಳಕಾಳಿಗಳೆಂಬುದನಾ ।
ಕುಳವಿಲ್ಲದೆ ವಿಬುಧರಱಿಗೆ **ಧರ್ಮೋಪಮೆ**ಯುಂ ॥ ೬೧॥

(ಧರ್ಮೋಪಮೆ)

ನಿನ್ನ ಮುಖದಂತೆ ಕಮಲಮಿ।
ದುನ್ನಿದ್ರಂ ನಿನ್ನ ತಳದ ವೋಲಾರಕ್ತಂ ॥
ನಿನ್ನಯನೀಪಲ್ಲವಮೆನೆ ।
ಸನ್ನುತರೂಪಿಂ **ವಿಪರ್ಯಯೋಪಮ**ಮುಕ್ತಂ ॥ ೬೨॥

(ವಿಪರ್ಯಯೋಪಮೆ)

ಕಂ॥ ಕಮಳಮಿದು ನಿನ್ನ ಮುಖದಂ ।
ತೆ ಮುಖಮುಮಿೞ ಕಮಲದಂತೆ ನಿಕ್ಕುವಮೆಂದಿಂ ॥
ತಮರ್ದಿರೆ ಪೇೞ್ವುದನಱಿಗು ।
ತ್ತಮರ **ನ್ಯೋನ್ಯೋಪಮಾ**ವನಾಮಾಂಕಿತಮಂ ॥ ೬೩॥

(ಅನ್ಯೋನ್ಯೋಪಮೆ)

ಸರಸಿಜದೊಳ್ ನಿನ್ನ ಮುಖಂ ।
ತರುಣೀ ಸದೃಶಂ ಸಮಂತು ಪೋಲದು ಪೆಱತಂ ॥
ಸಿರುತಮಿದೆಂಬುದು ನಿಯಮಾಂ ।
ತರಿತಂ **ನಿಯಮೋಪಮಾ** ವಿಕಲ್ಪಿತಭಾಗ್ಯಂ ॥ ೬೪॥

(ನಿಯಮೋಪಮೆ)

ಮದಮುದಿತಾಳಿಕದಂಬಂ ।
ಮೃದುವಿಳಸಿತಸರಸಕೇಸರಂ ಸರಸಿರುಹಂ ॥
ವದನಮಿದು ಲೋಲ ಲೋಚನ ।
ಮುದಿತಂ ಸ್ಮಿತದಶನವಸನರಾಗೋಪಚಿತಂ ॥ ೪೫॥

ಶರದಂಬರಮುಂ ಮತ್ತೀ ।
ಸರವರಮುಂ ವಿಳಸದತನುಧವಳಚ್ಛವಿಗಳ್ ॥
ಹರಿಣಾಂಕಾಲಂಕೃತಮುಂ ।
ಬರವಿೞಕೊಳಮುಚಿತರಾಜಹಂಸೋತ್ತಂಸಂ ॥ ೪೬॥

ಅಮದಾಲಸಲೋಚನಲೀ ।
ಲಮಪಾಸ್ತ ಭ್ರೂಲತಾವಿಲಾಸವಿಶೇಷಂ ॥
ಕಮಲಮದು ಪೋಲದೀ ನಿ ।
ನ್ನ ಮುಖಮನಿಂತೆತ್ತಮುಕ್ತಗುಣಭೂಷಣಮಂ ॥ ೪೭॥

ಅನಲನಸಾಧ್ಯಕಳಂಕಮು ।
ಮನನಿಳತಪನೀಯದೂಳಿಯಾನಜಲಕ್ಷ್ಮಾ ॥
ಳನಮನನಾಕಲಶೋಷ್ಯಮ ।
ನನಿಯತಕರ್ದಮಮನಯುಶಮಂ ತೊಱೆಗಱಿವಂ ॥ ೪೮॥

(ಇಂತು ವ್ಯತಿರೇಕಂ)

ಉಪಸಂಹೃತಿ—(೫) ಯಾಥಾಸಂಖ್ಯಾಲಂಕಾರಲಕ್ಷಣಂ.

ಕಂ॥ **ವ್ಯತಿರೇಕ** ವಿಕಲ್ಪಮನನು ।
ಗತಕ್ರಮವಿಶೇಷಗುಣಕೃತಾಂತಮನಱಿಗೀ ॥
ಮತದಿಂ **ಯಾಥಾಸಂಖ್ಯ** ।
ಪ್ರತೀತಿಯುಂ ತೋರ್ಪನನ್ವಿತಾನ(ನ್ವಿ)ತಮಂ ॥ ೪೯॥

ಲಕ್ಷ್ಯಂಗಳ್.

ಅಳಿಕಾನನನಯನಂಗಳಿ ।
ನಳಿನಳಿನೋತ್ಪಳವಿಳಾಸಮಂ ಗೆಲ್ದುದಱಿಂ ॥
ಕಳಹಂಸಲೀಲಗಮನೇ ।
ಕೊಳನಂ ಸೀಂ ಪೋಲ್ತೆಯೆಂಬುದನುಗತಮುಕ್ತಂ ॥ ೫೦॥
(ಯಾಥಾಸಂಖ್ಯಾನುಗತಂ)

ನಳಿನೋತ್ಪಳಾಳಿರುಚಿಗಳ ।
ನಳಕವಿಳೋಚನಮುಖಂಗಳೀಱ್ಕಳಿಗೊಳೆ ಸೀಂ ॥
ತಿಳಿಗೊಳನನೆ ಪೋಲ್ತಿರ್ದುಂ ।
ತಿಳಿಯದುದೇಕೆಂಬುದಿಂತನನ್ವಯಮದಱೊಳ್ ॥ ೫೧॥
(ಯಾಥಾಸಂಖ್ಯವ್ಯತಿರೇಕಂ)
[ಇಂತು ಯಾಥಾಸಂಖ್ಯಂ]

ಉಪಸಂಹೃತಿ—ಅವತರಣಿಕೆ.

ನಿಗದಿತ **ಯಥಾಸಂಖ್ಯಾ** ।
ನುಗತವ್ಯತಿರೇಕಯುಗಳಲಕ್ಷ್ಯಮಿವಕ್ಕುಂ ॥
ಬಗೆದಾ **ದೀಪಕದ** ವಿಭಾ ।
ಗಗತಿಯನೀಭೇದಲಕ್ಷ್ಯಲಕ್ಷಣಯುಗದಿಂ ॥ ೫೨॥

(೬) ದೀಪಕಾಲಂಕಾರಲಕ್ಷಣಂ.

ಜಾತಿಕ್ರಿಯಾಗುಣದ್ರ ।
ವ್ಯಾತಿಶಯವಿಶೇಷಿಯಪ್ಪ ಪದವೊರ್ಬುಳಿಸಿಂ ॥
ದೀತೆಱದಿನುೞಿದ ಕಾವ್ಯಸ ।
ಮೇತಿಗಮುಪಕಾರಿಯೋಗ್ಯದೀಪಕಮುಕ್ಕುಂ ॥ ೫೩॥

ಲಕ್ಷ್ಯಂಗಳ್.

ಮಲಯಾನಿಲನೊಯ್ಯನೆ ಪ ।
ಣ್ತೆಲೆಯುಂ ಸೆಲೆಯಿಂ ಕಳಲ್ಚುಗುಂ ವಿಟಪಿಗಳೊಳ್ ॥
ವಿಲಸಿತಕಳಿಕಾಕುಳಕೋ ।
ಮಲಾಂಕುರಮನಂತೆ ಪಡೆಗುಮವಱಿಡೆಯಿಡೆಯೊಳ್ ॥ ೫೪॥
(ಜಾತ್ಯನುಗತಮಾದಿದೀಪಕಂ)

ತಿರಿತರ್ಕುಮಮಳಜಳನಿಧಿ |
ಪರಿಖಾವೃತಭೂಮಿಭಾಗಮಂ ಭರದೆ ಜಳಾ ||
ಕರವಿಕ್ಷೇಪಕಕಕುದಂ |
ತರಮಂ ಸವಿಶೇಷರುಚಿರಸಂಭವವಿಧಿಯಂ || ೫೫||

(ಕ್ರಿಯಾನುಗತಮಾದಿದೀಪಕಂ)

ಕಂ|| ವಿಶದತರಮಾಯ್ತು ಗುಣಮಣಿ |
ವಿಶೇಷಭೂಷಣದಿನೀ ತ್ವದೀಯಾಕಾರಂ ||
ಶಶಧರಕಿರಣಾಭಭವ |
ದ್ಯಶೋವಿತಾನದಿನಶೇಷ ಮಾಶಾವಳಯಂ || ೫೬ ||

(ಗುಣಾನುಗತಮಾದಿದೀಪಕಂ)

ದಿವಸಕರನುದಯಗಿರಿಶಿಖ |
ರವಿಶೇಷವಿಭೂಷಣಂ ತಮೋರಿಪುಬಳಮಂ ||
ಪ್ರವಿಲೀನಂಮಾಡಿದನವ |
ಯವದೊಳ್ ತಾರಾವಿತಾನತೇಜಮನಱಿದಂ || ೫೭||

(ದ್ರವ್ಯಾನುಗತಮಾದಿದೀಪಕಂ)

[ಇಂತು ದೀಪಕಂ]

ಉಪಸಂಹೃತಿ,

ದೀಪಕಮಾಜಾತ್ಯಾದಿನಿ |
ರೂಪಕವಿಂತಕ್ಕುಮಾದಿಯೊಳ್ ಮಧ್ಯಾಂತ ||
ವ್ಯಾಪಕಮನದಂ ತಱಿಸ |
ಲ್ಕೀಪೇಳ್ದ ವಿಕಲ್ಪಲಕ್ಷ್ಯದೊಳ್ ಕವಿಮುಖ್ಯಂ || ೫೮||

(೭) ಉಪಮಾಲಂಕಾರಲಕ್ಷಣಂ.

ನಾನಾವಸ್ತುವಿಭೇದಮ |
ನೇನಾನುಂ ತೆಱದೆ ಪೋಲ್ಕೆ ಮಾಡುವುದುಪಮಾ ||
ಮಾನಿತಸದಲಂಕಾರಮ |
ನೂನವಿಕಲ್ಪಪ್ರಪಂಚಮಿಂತೆಱನದಱಾ || ೫೯||

ಲಕ್ಷ್ಯಂಗಳ್.

ವನರುಹದಂತೆ ಮುಖಂ ಲೋ |
ಚನಮೆಸೆವುತ್ಪಳದವೋಲ್ ತಳಂ ತಳಿರಂತೆಂ ||
ದನುರೂಪಮಾಗಿ ಪೇಱಿರ್ದೊ |
ಡೆನಸುಂ **ವಸ್ತೂಪಮಾನ** ಮೆಂಬುದು ಪೆಸರಿಂ || ೬೦||

(ವಸ್ತೂಪಮೆ)

ತಳಿರ್ಗಳವೋಲ್ ಮೆಲ್ಲಿದುವೀ |
ತಳಂಗಳಳಿಕುಳದವೋಲ್ ವಿನೀಳಂಗಳ್ ನಿ ||
ನ್ನಳಕಾಳಿಗಳೆಂಬುದನಾ |
ಕುಳವಿಲ್ಲದೆ ವಿಬುಧರಱಿಗೆ **ಧರ್ಮೋಪಮೆ**ಯುಂ || ೬೧||

(ಧರ್ಮೋಪಮೆ)

ನಿನ್ನ ಮುಖದಂತೆ ಕಮಲವಿ |
ದುನ್ನಿದ್ರಂ ನಿನ್ನ ತಳದ ವೋಲಾರಕ್ತಂ ||
ನಿನ್ನಯನೀಪಲ್ಲವಮೆನೆ |
ಸನ್ನುತರೂಪಿಂ **ವಿಪರ್ಯಯೋಪಮ**ಮುಕ್ತಂ || ೬೨||

(ವಿಪರ್ಯಯೋಪಮೆ)

ಕಂ|| ಕಮಳವಿದು ನಿನ್ನ ಮುಖದಂ |
ತೆ ಮುಖಮುಮಿಾ ಕಮಲದಂತೆ ನಿಕ್ಕುವಮೆಂದಿಂ ||
ತಮರ್ದಿರೆ ಪೇೞ್ದುದನಱಿಗು |
ತ್ತಮರ **ನ್ಯೋನ್ಯೋಪಮಾನ**ನಾಮಾಂಕಿತಮಂ || ೬೩||

(ಅನ್ಯೋನ್ಯೋಪಮೆ)

ಸರಸಿಜದೊಳ್ ನಿನ್ನ ಮುಖಂ |
ತರುಣೀ ಸದೃಶಂ ಸಮಂತು ಪೋಲದು ಪೆಱತಂ ||
ನಿರುತವಿದೆಂಬುದು ನಿಯಮಾಂ |
ತರಿತಂ **ನಿಯಮೋಪಮಾ** ವಿಕಲ್ಪಿತಭಾಗಂ || ೬೪||

(ನಿಯಮೋಪಮೆ)

ಕಮಳಮಿದನ್ನಿಗಮೊ ನಿ ।
ನ್ನ ಮುಖದೊಳೋರಂತೆ ಪೆಱದುಮಿದಱೊಳ್ ಸದೃಶಂ ॥
ಸಮವಾಯಮುಳ್ಳೊಡೆಲ್ಲಂ ।
ಸಮನಿಸುಗಂತೆಂಬುದನಿಯಮೋಪಮೆ ಯಕ್ಕುಂ ॥ ೬೫॥

(ಅನಿಯಮೋಪಮೆ)

ವದನಂ ಮಧೀಯಲೋಚನ ।
ಮುದಾವಹಂ ಕಮಲಮಳಿಕುಲೋತ್ಸವಜನಕಂ ॥
ವಿದಿತವಿಭೇದಕ್ರಮಮಿಂ ।
ತಿದಲ್ಲದಿಲ್ಲೆಂಬುದತಿಶಯೋಪಮೆ ಸತತಂ ॥ ೬೬॥

(ಅತಿಶಯೋಪಮೆ)

ಈಕೆಯ ವದನಾಕಾರಮ ।
ನೇಕಾಂತಂ ಪೋಲ್ವೆನೆಂಬುದರ್ಕಾಗಿ ಕನ ॥
ತ್ಕೋಕನದಕ್ಕಿಂಪುಗಮುಂ ।
ಟಾಕಾಂಕ್ಷಣಮುದಱೊಳೆಂಬುದುಪಮೋತ್ಪ್ರೇಕ್ಷಂ ॥ ೬೭॥

(ಉಪಮೋತ್ಪ್ರೇಕ್ಷೆ)

ಕಮಳಂ ಲಲಿತಭ್ರೂವಿ ।
ಭ್ರಮಮುಂ ವಿಲಸಿತವಿಲೋಲಲೋಚನಯುಗಮುಂ ॥
ಸಮವಾಯಮುಳ್ಳೊಡದು ನಿ ॥
ನ್ನ ಮೊಗಕ್ಕಣೆಯೆಂಬುದದ್ಭುತೋಪಮೆ ನಿಯತಂ ॥ ೬೮॥

(ಅದ್ಭುತೋಪಮೆ)

ಕಮಳಮಿಮೋಹದಿನೀ ನಿ ।
ನ್ನ ಮೊಗಕ್ಕೆಱಗುವುದು ತೊಱೆವುದಾ ಸರಸಿಜಮುಂ ॥
ಭ್ರಮರಂ ವದನಮಿದಲ್ತೆಂ ।
ದು ಮೋಹದಿಂದೆಂಬುದಿದುವೆ ಮೋಹೋಪಮಿತಂ ॥ ೬೯॥

(ಮೋಹೋಪಮೆ)

ಕಂ|| ಸರಸಿಜವೋ ಮೊಗವೋ ಮೇಣ್ |
ದ್ವಿರೇಫವೋ ಲೋಲನಯನಯುಗವೋ ಮನದೊಳ್ ||
ಪಿರಿದುಂ ಸಂಶಯಮೆಂಬುದು |
ನಿರಂತರಂ **ಸಂಶಯೋಪಮಾ**ಲಂಕಾರಂ || ೨೦||

(ಸಂಶಯೋಪಮೆ)

ಸರಸಿರುಹವಿಂದುದೀಧಿತಿ |
ಪರಾಜಿತಶ್ರೀವಿಲಾಸವಿೂ ನಿನ್ನ ಮುಖಂ ||
ಹರಿಣಧರವಿಜಯಶೋಭಾ |
ಕರವೆಂಬುದಿ**ದೂರ್ಜಿತೋಪಮಾನ**ವಿಭಾಗಂ || ೨೧||

(ಊರ್ಜಿತೋಪಮೆ)

ಪರಮಶ್ರೀನಿಳಯಂ ಶಶ |
ಧರಕಾಂತಿವಿರೋಧಿರೋಚಿ ವದನಂ ನಿನ್ನಾ ||
ಸರಸಿರುಹದವೋಲೆಂಬುದು |
ನಿರುತಂ **ಶ್ಲೇಷೋಪಮಾ** ವಿಕಲ್ಪವಿಶೇಷಂ || ೨೨||

(ಶ್ಲೇಷೋಪಮೆ)

ಸರಜಂ ಸರಸೀಜಂ ಶಶ |
ಧರಬಿಂಬಮದತಿಕಳಂಕಿತಂ ನಿನ್ನಮೊಗಂ ||
ನಿರುಪಮಮಾಗಿಯುಮಿವರೊಳ್ |
ದೊರೆಯೆಂಬುದನಱಿದು ಕೊಳ್ಗೆ **ನಿಂದೋಪಮೆಯಂ** || ೨೩||

(ನಿಂದೋಪಮೆ)

ಅಮೃತಭವಂ ಶಿಶಿರಕರಂ |
ಕಮಲಂ ಜಗದೇಕಪಾವನೀಯಶ್ರೀಕಂ ||
ಸಮನವಱೊಳ್ ನಿನ್ನ ಮುಖಂ |
ಕ್ರಮದೆಂಬುದನಱಿವುದಾ **ಪ್ರಶಂಸೋಪಮೆ**ಯಂ || ೨೪||

(ಪ್ರಶಂಸೋಪಮೆ)

ಶರದುದಿತಶಿಶಿರಕರನುಂ ।
ಸರಸಿರುಹಮುಮೊತ್ವದೀಯವದನಮುಮಿನಿತುಂ ॥
ದೊರೆಕೊಳಿಸುವೊಡೆ ಪರಸ್ಪರ ।
ವಿರೋಧಿಗಳ್ ನಿರುತಮೆನೆ ವಿರೋಧೋಪಮಿತಂ ॥ ೭೫॥

(ವಿರೋಧೋಪಮೆ)

ಅಳಿಗಳಿವು ಕಣ್ಗಳಲ್ತಿವು ।
ನಳಿನಮಿ(ದುಂ) ವದನಮಲ್ತು ನಿಜಕಾಮಿನಿಯಾ ॥
ತಿಳಿದಿಂತು ಪೇೞ್ದೊಡಿದು ಮೊ ।
ಕ್ಕಳಮುಪಮಾಖ್ಯಾತಮಪ್ಪ ತತ್ವಾಖ್ಯಾತಂ ॥ ೭೬॥

(ತತ್ವಾಖ್ಯಾನೋಪಮೆ)

ಹರಿಣಧರಸರಸಿಜಂಗಳ್ ।
ದೊರೆಯಲ್ಲವು ತನಗೆ ತಾನೆ ದೊರೆ ನಿನ್ನ ಮೊಗಂ ॥
ನಿರುಪಮ ಮೆಂಬುದನಱಿವುದು ।
ನಿರುತಮಸಾಧಾರಣೋಪಮೋದಯವಿಧಿಯಂ ॥ ೭೭॥

(ಅಸಾಧಾರಣೋಪಮೆ)

ನುತಶಿಶಿರಕಿರಣಕಾಂತಿ ।
ಪ್ರತತಿಯನೊಡಗೂಡಿ ಮಾಡಿದಪೊಲಾಯಿತ್ತಿಂ ॥
ತತಿಶಯಮಿ ನಿನ್ನ ಮುಖಂ ।
ನಿತಾಂತಮೆಂಬಾಗಳಱಿಗಭೂತೋಪಮೆಯಂ ॥ ೭೮॥

(ಅಭೂತೋಪಮೆ)

ಹರಿಣಧರನೊಳ್ ವಿಷಂ ಮಲ ।
ಯರುಹದೊಳನಲಾರ್ಚಿ ನಿನ್ನ ವದನೋದರದೊಳ್ ॥
ಪರುಷತರವಚನಮಪ್ಪುದು ।
ದುರವಾಪಮಿದಿಂತಸಂಭವೋಪಮಮಕ್ಕುಂ ॥ ೭೯॥

(ಅಸಂಭವೋಪಮೆ)

ಮಲಯರುಹತಿಶಿರಕರಶೀ |
ತಲಿಕಾಕರಕೇಂದುಕಾಂತಜಲಶೀತಲಪಿ ||
ಲಲನಾಲಿಂಗನ ಸುಖಕರ !
ವಿಲಾಸಮೆಂಬುದು **ಬಹೂಪಮಾನವಿಕಲ್ಪಂ** || ೮೦||

(ಬಹೂಪಮೆ)

(1) ವಿನಯದೊಳಱಿವಿನ ವೋಲಱಿ |
ವಿನಬ. ನೊಳುಪಶಮದವೋಲ್ ? ಗುಣದವೊಲಾದಱಿವಂ ||
ಗುಣದೊಳ್ ಸಿರಿಯೊಳ್ ... |
ತನಗೆನೆ **ಮಾಲೋಪಮಾನ** ಭೇದವಿಕಲ್ಪಂ || ೮೧||

(ಮಾಲೋಪಮಾಭೇದಂ)

ಜಸಿತಪ್ರಗಲ್ಭದೊಳ್ ಮಾಂ |
ತನದೊಳ್ ಮಾಹಾತ್ಮ್ಯದೊಳ್ ನಿಜೋದಾರತೆಯೊಳ್ ||
ಅನುಪಮಗುಣದೊಳ್ ಶ್ರೀಶಂ |
ಘನಮೆನೆ **ಮಾಲೋಪಮಾನ** ಭೇದವಿದಕ್ಕುಂ || ೮೨||

(ಮಾಲೋಪಮಾ ಭೇದಂ)

ಭವದೀಯವದನಮಾಲೋ |
ಲವಿಲೋಚನಮುದಿತರಾಗಮಣಿಪಿಲಸಿತಮಂ ||
ಪ್ರವಿಕಸಿತಾಂಬುಜವನಮಂ |
ಸವಿಶೇಷಂ ಪೋಲ್ಗುಮೆಂಗೆ **ವಾಕ್ಯೋಪಮೆಯುಂ** || ೮೩||

(ವಾಕ್ಯೋಪಮೆ)

ಕಂ|| ವಿಪರೀತಂ ತರುತತಿವೋ |
ಲಪರಾಗಂ ಶುದ್ಧಭೂಮಿವೋಲ್ ಪದ್ಮಿನಿವೋ ||
ಲುಪಗತವಿಭ್ರಮರಹಿತಂ |
ಕುಪಿತಾಕೃತಿ ಯೆಂಬುದುಪಮೆ **ಸಂಧಾನಾಂಕಂ** || ೮೪||

(ಸಂಧಾನೋಪಮೆ)

(1) ಇದು ಮದ್ರಾಸ್ ಪುಸ್ತಕಭಂಡಾರದಲ್ಲಿರುವ ಪ್ರತಿಯಲ್ಲಿ ಮಾತ್ರವಿದೆ, ಛಂದಸ್ಸು ತಪ್ಪಾಗಿದೆ. ೮೨ ನೆಯ ಪದ್ಯವಾದಮೇಲಿರಬಹುದು.

ಪ್ರತಿವಸ್ತೂಪಮಿ ತಾಲಂ ।
ಕೃತಮಿಂತಕ್ಕುಂ ಧರಾಧಿಪಾ ನಿನ್ನನ್ನಂ ॥
ವಿತತಯಶನಿಲಯತಾರಾ ।
ತತಿ ದಿನಕರಸದೃಶತೇಜಮೆಂಬುದುಮುಂಟೇ ॥ ೮೫॥

(ಪ್ರತಿವಸ್ತೂಪಮೆ)

ಸುರಗಿರಿವೋಲ್ ಧೈರ್ಯದಿನಂ ।
ಬರಮಣಿವೋಲ್ ತೇಜದಿಂ ಶಶಾಂಕಂಬೋಲ್ಬಂ ॥
ಧುರಕಾಂತಿಗುಣದಿನೆಂದಿಂ ।
ತಿರೆ ಪೇೞ್ವುದನಱಿದು ಕೊಳ್ಗೆ ಹೇತೂಪಮೆಯಂ ॥ ೮೬॥

(ಹೇತೂಪಮೆ)

ಉಪಮಾಗುಣ ದೋಷಂಗಳ್.

ಹೀನಾಧಿಕಗುಣದೋಷ ವಿ ।
ತಾನಮುಮುಂ ಲಿಂಗವಚನಭೇದಂಗಳುಮಂ ॥
ಮಾನಧನರಱಿದು ಪೇೞ್ಗನು ।
ಮಾನಕ್ಕವಿರುದ್ಧಮಾಗೆ ಲಕ್ಷ್ಯಾಗಮದೊಳ್ ॥ ೮೭॥

ಹೀನಾಧಿಕಪ್ರಶಂಸಾಗುಣಕ್ಕೆ ಲಕ್ಷ್ಯಂ.

ನಿನ್ನಂತೆ ಸುರೇಶ್ವರನು ।
ತ್ಪನ್ನಮಹೈಶ್ವರ್ಯನೆಂಬುದುಂ ಜಲನಿಧಿ ತಾಂ ॥
ಸನ್ನುತಗಭೀರನೆಂಬುದು ।
ಮಿನ್ನದು ಹೀನಾಧಿಕಪ್ರಶಂಸಾನುಗುಣಂ ॥ ೮೮॥

(ಹೀನಾಧಿಕಪ್ರಶಂಸಾಗುಣಂ)

ಹೀನಾಧಿಕಪ್ರಶಂಸಾದೋಷಕ್ಕೆ ಲಕ್ಷ್ಯಂ.

ಕೊಳದಂತಂಬರಮುತಿನಿ ।
ರ್ಮಳಮಿೂತಂ ಸ್ವಾಮಿಭಕ್ತನೆಂದುಂ ನಾಯ್ವೋ ॥
ಲಿಳೆಯುಂ ಕರಮೆಂಬುದಿದ ।
ಗ್ಗಳಮಾಹೀನಾಧಿಕ ಪ್ರಶಂಸಾದೋಷಂ ॥ ೮೯॥

(ಹೀನಾಧಿಕಪ್ರಶಂಸಾದೋಷಂ)

ಲಿಂಗವಚನಭೇದದೋಷಕ್ಕೆ.

ಕಂ|| ಪುರುಷಂಬೊಲೀಕೆ ಕರಂ |
ಪುರುಷಾಕೃತಿಯೆಂಬುದಂತು ನಾನಾಲಿಂಗಂ ||
ನಿರುತಂ ಪ್ರಾಣಂಗಳವೋಲ್ |
ನೆರಪಂ ಪ್ರಿಯನೆಂಬುದಂತು ನಾನಾವಚನಂ || ೯೦||

(ಇಂತುಪಮಾಲಂಕಾರಂ)

ಉಪಸಂಹೃತಿ—ಅವತರಣಿಕೆ.

ಕಂ|| ಇಂತುಪಮಾಕ್ರಮಮನಪ |
ರ್ಯಂತಂ ಗುಣಗಣಮನಱಿದು ಪೇೞ್ಗೆ ಕವೀಶರ್ ||
ಸಂತತಮಿಂತಕ್ಕುಂ ಕಾಂ |
ತಾಂತಿಕಮತಿಶಯದ ಲಕ್ಷ್ಯಲಕ್ಷಣಯುಗಳಂ || ೯೧||

---

(೮) ಅತಿಶಯೋಕ್ತ್ಯಲಂಕಾರಲಕ್ಷಣಂ.

ಮೇರೆಗಳೆದಿರೆ ವಿಶೇಷದಿ |
ಚಾರಮನತಿಶಯೋಕ್ತಿಯೊಳ್ ತಗುಳ್ದು ಪ್ರಪಕ್ಕುಂ ||
ಸಾರತರಮತಿಶಯಾಲಂ |
ಕಾರಂ ಮತ್ತದಱ ಲಕ್ಷ್ಯಮೆಂತೆನೆಂದುಂ || ೯೨||

ಲಕ್ಷ್ಯಂಗಳ್.

ಗೈರಿಕರಸಾರ್ದ್ರಮಂ ಸಿಂ |
ಧೂರದೆ ತಲೆವಱಿದುದಂ ಕರಂ ಕಂಡಾಂ ಸಂ ||
ಧ್ಯಾರಾಗದೊಳಱಿಯದೆ ಮದ |
ವಾರಣಮಂ ಸೋಂಕಿ ಕೆಲದೊಳಾಯ್ತನೆ ಪೋದಂ || ೯೩||

ಮಲಯಜಚರ್ಚಿತೆಯುಂ ಕೇ |
ವಲಧವಳಾಭರಣೆಯುಂ ದುಕೂಲಾಂಬರೆಯುಂ ||
ಕೆಲದೊಳ್ ನಿಲೆಯುಂ ಜ್ಯೋತ್ಸ್ನಾ |
ವಿಲಾಸದೊಳ್ ಒಗೆದನಿಲ್ಲ ನಲ್ಲಳಿನಿಸಂ | ೯೪||

ಕಂ|| ಆಶಾವಳಯಿತಲೋಕಾ |
ಕಾಶಮಿದೇನತಿವಿಶಾಲಮೋ ನಿನ್ನ ಯಶೋ ||
ರಾಶಿಯನಿಂದುದ್ಯುತಿಯ ನಿ |
ಕಾಶಮನೊಳಕೊಳ್ಗ ಮಳವಿಗಱಿದಿರ್ದುದುಮಂ || ೯೫||

[ಇಂತತಿಶಯೋಕ್ತ್ಯಲಂಕಾರಂ]

(೯) ಸದೃಶಯೋಗಿತಾಲಂಕಾರ ಲಕ್ಷಣಂ.

ಸ್ತುತಿನಿಂದೆಗಳಿಂ ಸವಿವ |
ಕ್ಷಿತಗುಣದೊಳ್ ಸದೃಶಮಾಗಿ ಪೇೞ್ವುದು ಪೆಱತಂ ||
ನುತಸದೃಶಯೋಗಿತಾಲಂ |
ಕೃತಿಲಕ್ಷಣಮಕ್ಕುಮಿಂತು ತದುದಾಹರಣಂ || ೯೬||

ಲಕ್ಷ್ಯಂಗಳ್.

ಅಮರಾಧಿರಾಜಹುತವಹ |
ಯಮನೈಋತವರುಣವಾಯುಯಕ್ಷೇಶಾನ ||
ಕ್ರಮದಿನವರೆಣ್ಬರಂತು |
ತ್ತಮನೈ ನೀಂ ನವಮಲೋಕಪಾಲನೆ ಅವರೊಳ್ || ೯೭||

ಜಲದದ ನೆಲಿಲುಂ ಪರಮ್ಮುಂ |
ವಿಲಾಸಮುಂ ಬೆಳಗುವುದಿತವಿದ್ಯುಲ್ಲತೆಯುಂ ||
ನೆಲಸವು ಚಲಂಗಳಾದಂ |
ವಿಲಾಸಿನೀಜನದ ನಲ್ಮೆಯುಂ ಸಂಗಮುಮುಂ || ೯೮||

ಉಪಸಂಹೃತಿ.

ಉಪಮಿತಭೇದೋಕ್ತಿಕ್ರಮ |
ಮಪರಿಮಿತಾಖ್ಯಾಕೃತಿ ಪ್ರಯೋಗಾನುಗತಂ ||
ನೃಪತುಂಗದೇವಮತದಿಂ |
ದುಪಮಾಭೇದಂಗಳಿಂದೆ ತಱಿಸಲ್ಗಱಿವಂ || ೯೯||

ಇವುಮುಪಮಿತಭೇದಂಗಳ್.

[ಇಂತತಿಶಯಾಲಂಕಾರಂ]

(೧೦) ಆಕ್ಷೇಪಾಲಂಕಾರಲಕ್ಷಣಂ.

ಕಂ|| ವಿದಿತಾರ್ಥವಿಪರ್ಯಾಸಾ।
ಸ್ಪದಮೆ ದಲಾಕ್ಷೇಪಮೆಂಬಲಂಕಾರಂ ಮ॥
ತ್ತದಱ ವಿಶೇಷವಿಭಾಗಮ।
ನುದಾಹರಣಮಾರ್ಗದಿಂ ಪ್ರಯೋಗಿಸಿ ತೋರ್ಪೆಂ॥ ೧೦೦||

ಲಕ್ಷ್ಯಂಗಳ್.

ಮೃದುತರಮಾರ್ಗದೆ ಕೆನ್ನಂ।
ಮದನಶರಾನೀಕವೊಯ್ಕನೊಲವಂ ಪಡೆಗುಂ॥
ಹೃದಯಮನಳ್ಳವಳಲಿಂದುಱಿ।
ವಿದಾರಿಸುವುದಿಂತು ಕುಸುಮಮಯಮಲ್ತದಱಿಂ॥ ೧೦೧||
(ವೃತ್ತಾಕ್ಷೇಪ)

ಧನಮಂ ನೆರಪದೆ ವಿದ್ಯಾ।
ಧನಮಂ ಮಾಡದೆ ತಗುಳ್ದು ನೆಗಲಿದೆ ತಪದೊಳ್॥
ಮನುಜತ್ವಮಫಲಮಾಯ್ತಂ।
ತೆನಗೆಂಬುದನಱಿವುದನುಶಯಾಕ್ಷೇಪಕಮಂ॥ ೧೦೨||
(ಅನುಶಯಾಕ್ಷೇಪ)

ಸರಸಿಜವಿರೋಧಿ ಕಾಂತ್ಯಾ।
ಕರಮಮೃತಮಯಂ ತ್ವದೀಯಮುಖಶಶಿಯುಂಟಾ॥
ಗಿರೆ ಶಶಿಯಸೇವುದೆಂಬುದು।
ನಿರುತಂ ಶ್ಲೇಷಾನುವಿದ್ಧಮಪ್ಪಾಕ್ಷೇಪಂ॥ ೧೦೩||
(ಶ್ಲೇಷಾಕ್ಷೇಪಂ)

ವರಹಂಸಕದಂಬಕಮದು॥
ಶರದಂಬುದಮಲ್ತು ಮುಖರನೂಪುರಸಂವಾ॥
ನಿರವಂ ನೆಗಳ್ದಿಪ್ಪುದು ಬಂ।
ಧುರಮುದಱಿಂದಿದರೊಳೆಂಬು ದುಪಮಾಕ್ಷೇಪಂ॥ ೧೦೪||
(ಉಪಮಾಕ್ಷೇಪ)

ಕಂ|| ಮದಕರಿಯೋ ಘನಸಮಯಾಂ ।
ಬುದವೋ ಘನಮಲ್ತು ನೆಗಳ್ವುದದಱಿರೊಳ್ ಸಪ್ತ ॥
ಚ್ಛದಗಂಧಸುರಭಿ ಪದುಳಂ ।
ಮದಕರಿಯೆನೆ ನೆಗೆ ಸಂಶಯಾಕ್ಷೇಪಕಮಂ ॥ ೧೦೫||

(ಸಂಶಯಾಕ್ಷೇಪ)

ಮಾನಧನಾ ಪೊಗೞಿಸಲೇಂ ।
ದಾಸಿಯೆ ನೀನಂತೆ ನಿನ್ನ ಕಸವರಮೆಂದುಂ ॥
ದೀನಾನಾಥರ ಕೆಯ್ಯದು ।
ದಾಸಿಯದೆಂತೆಂ [ಬುದಂತು ಹೇತ್ವಾಕ್ಷೇಪಂ ॥ ೧೦೬||

(ಹೇತ್ವಾಕ್ಷೇಪಂ)

ವ್ಯತಿರೇಕವಿಕಲ್ಪ ಮಿ]ದೆಂ ।
ದತಿಶಯಧವಳೋಪದೇಶಮಾರ್ಗ ಕ್ರಮದಿಂ ॥
ದತಿನಿಪುಣರಱಿದು ಕೊಳ್ಗನು ।
ಮತಿಯಿಂದಾಕ್ಷೇಪನೆಂಬಲಂಕಾರಮುಮಂ ॥ ೧೦೭||

(ಇಂತಾಕ್ಷೇಪಾಲಂಕಾರಂ)

(ಇದು ವ್ಯತಿರೇಕವಿಕಲ್ಪಂ)

ಉಪಸಂಹೃತಿ.

ಗೀತಿಕೆ||ಪ್ರತಿಪದಾರ್ಥತತ್ವಭೇದದೊಳ್ ।
[ಪ್ರತಿಷೇಧಮನೆಗಳ್ಗಮನಿತ ಮಾಱ್ಕೆಯಿಂ ॥
ದತಿಶಯಾಕ್ಷೇಪಗಣನಾವ್ಯತಿ ।
ಗತಿ ನೃಪತುಂಗದೇವಮಾರ್ಗದೊಳ್ ॥ ೧೦೮||

(೧೧) ಶ್ಲೇಷಾಲಂಕಾರಲಕ್ಷಣಂ.

ಕಂ|| ನಾನಾರ್ಥಮೇಕರೂಪಾ ।
ಧೀನವಚೋರಚಿತಮಪ್ಪೊಡಕ್ಕುಂ ಶ್ಲೇಷಂ ॥
ಮಾನಿತಮಳಂಕ್ರಿಯಾನುವಿ ।
ಧಾನಂ ಮ]ತ್ತಿಂತು ತದುಪೃಕ್ಷ್ಯವಿಕಲ್ಪಂ ॥ ೧೦೯||

ಲಕ್ಷ್ಯಂಗಳ್

ಉದಯಾ] ರೂಢಂ ಕಾಂತ್ಯಾ ।
ಸ್ಪದ ನನುರಕ್ತಾತ್ಮಮಂಡಳಂ ಕುಮುದಕರಂ ॥
ಮೃದುತರಕರಂಗಳಿಂದತಿ ।
ಮುದಮಂ ಲೋಕಕ್ಕೆ ಪಡೆಗುಮಿಂತೀರಾಜಂ ॥ ೧೧೦॥

ವಿಪುಳತ [ರಕಟಕನುದ್ಯ ।
ದ್ವಿಪಹಲೆ (ರಿ) ಮಹಿಷೀಸಿಷೇವ್ಯ ನುನ್ನತಪಾದಂ ॥
ವ್ಯಪಸೀತಶ್ರೀಫಲದಂ ।
ವಿಪರೀತಕನಪ್ಪನಂತು ಭೂಭೃನ್ನಾಥಂ ॥ ೧೧೧॥

ಕಂ॥ ನೆರೆದ ವಿಸಂವಾದಂ ಪಂ ।
ಜರಶುಕತತಿಯೊಳ್ ಕುಲಾಲಗೇಹಂಗಳೊಳಂ ॥
ಪರಚಕ್ರಭ್ರಾಂತಿಗಳ ।
ಧ್ವರದೊಳೆ ನೆಗಬ್ಗಿಂ ಮಹಾಹವಧ್ವಸಿಸಿಯುತಂ॥ ೧೧೨॥

ಅರಿಗೋತ್ರಭೇದಿ ವಿಬುಧೇ ।
ಶ್ವರನಲ್ಲಂ ಧೃತಕಳಾಕಳಾಪಂ ದೋಷಾ ॥
ಕರನಲ್ಲಂ ವಿಧುತೋಮಾ ।
ವರನಾತ್ತಭುಜಂಗನಲ್ಲನೀಭೂಪಾಳಂ ॥ ೧೧೩॥

ಉಪಸಂಹೃತಿ.

ವರರೂಪಕಾದ್ಯಳಂಕಾ ।
ರರಚನೆಯೊಳ್ ಮುನ್ನೆ ಪೇಳ್ದು ಬಂದಂ ಕೆಲವಂ ॥
ದೊರಕೊಳೆ ಬಗೆಗೀ ತೆಱದಿಂ ।
ನಿರಂತರವಿರುದ್ಧನಿಯುಪ.ತಶ್ಲೇಷೆಗಳಂ ॥ ೧೧೪॥

(ಇಂತು ಶ್ಲೇಷಾಲಂಕಾರಂ)

(೧೨) ಉತ್ಪ್ರೇಕ್ಷಾಲಂಕಾರಲಕ್ಷಣಂ.

ತಱಿಸಂದು ಪಲವುತೆಱದಿಂ ।
ತೆಱೆದಿರೆ ನೆಗೞ್ದಿರ್ದುದೊಂದು ವಸ್ತುಸ್ಥಿತಿಯಂ ॥
ಮಱಿಸಿ ಪೆಱತೊಂದು ಮಾೞ್ಕೆಯಿ ।
ನಱಿಪುವುದುತ್ಪ್ರೇಕ್ಷೆಯೆಂಬುದಿಂತದಱ ತೆಱಂ ॥ ೧೧೫॥

ಲಕ್ಷ್ಯಂಗಳ್.

ನಡುವಗಲ ಬಿಸಿಲ್ ತನ್ನಂ ।
ಸುಡೆ ವನಕರಿ ಕಮಲಬಂಧುವೊಳ್ ದಿನಕರನೊಳ್ ॥
ಕಡುಗಾಯ್ಪನೆ ಸರಸಿಜಮಂ ।
ಕಿಡಿಸಲ್ ತಾಂ ಪೊಕ್ಕುದಾಗ ಬಗೆಗಾ ಕೊಳನಂ ॥ ೧೧೬॥

ನೆಲಸಿ ಕಿವಿಯೊಳ್ ಮದಾಯತ ।
ವಿಲೋಕದೊಳ್ ಪೊಳೆವುದೊಳ್ಪಿನೆಂದೀ ಕರ್ಣೋ ॥
ತ್ಪಲಮುಮನಾಕ್ರಮಿಸುವುದಿದು ।
ವಿಲಾಸಿನೀ ನಿನ್ನ ಲೋಲಲೋಚನಯುಗಳಂ ॥ ೧೧೭॥

(ಇಂತುತ್ಪ್ರೇಕ್ಷಾಳಂಕಾರಂ)

(೧೩) ಸೂಕ್ಷ್ಮಾಲಂಕಾರಲಕ್ಷಣಂ.

ಬಗೆದಿಂಗಿತಚೇಷ್ಟಾಕಾ ।
ರಗತಂಗಳಿನಂತರಂಗಮೊಳ್ ಮಱಸಿದುದಂ ॥
ಮಿಗೆ ಸೂಚಿಸುವುದು ಸೂಕ್ಷ್ಮಾ ।
ನುಗತಾಳಂಕಾರಮಿಂತು ತದುದಾಹರಣಂ ॥ ೧೧೮॥

ಕಂ॥ ತಿಳಿಪಲಡಿಗೆಱಗಿ ದೋಷನ ।
ತಳಂಗಳಾ ತೀಟದಿಂ ಪದಂಗಳೊಳೊಗೆದಾ ॥
ಪುಳಕಚಯಂಗಳ್ ಕಳೆದುವು ।
ಮುಳಿಸಂ ನಲ್ಲಳ್ಗೆ ಬೆಳ್ಮೊಗಂಗೆಯ್ದಿರೆಯುಂ ॥ ೧೧೯॥

ಪರುಷಾಳಾಪಮುಮತಿಸಿ |
ಷ್ಕ್ರರಪೇಕ್ಷಣಮುಖವಿಕಾರಮುಂ ಮಱಸಿಲ್ಪುಂ ||
ತರಳಾಪಾಂಗಮುಮಾಕೆಯ |
ದರಹಸಿತಮುಮಱಿಯೆ ಪೇೞ್ಗು ಮೆಱಕಮನೆರ್ದೆಯೊಳ್ || ೧೨೦||

(ಇಂತು ಸೂಕ್ಷ್ಮಾಲಂಕಾರಂ)

### (೧೪) ವಿಶೇಷಾಲಂಕಾರಲಕ್ಷಣಂ.

ಗುಣಜಾತ್ಯಾದಿಗಳೊಳಗನು |
ಗುಣಮಾಗಿರೆ ಪೇೞ್ದವಱ ವಿಕಳತೆಯಂ ಸ ||
ಯ್ತೆಣಿಸಿ ವಿಶೇಷಮನಱಿಪುವ |
ಗಣನೆ ವಿಶೇಷಾನುಭಾವಸದಳಂಕಾರಂ || ೧೨೧||

### ಲಕ್ಷ್ಯಂಗಳ್.

ಅಲರಂಬು ಕಬ್ಬವಿಲ್ ಕೋ |
ಮಲಸರಸಿಜನಾಳತಂತು ತಿರು ಮತ್ತಿವಱಾ ||
ಬಲದಿನಗಲ್ದರನೆಚ್ಚಾ |
ತ್ರಿಲೋಕಮಂ ಕಂತು ಬಸಕೆ ಬರಿಸುವನೆಂತುಂ || ೧೨೨||

ಸ್ಫುರಿಯಿಸದೆ ದಶನವಸನಾಂ |
ತರಮಾರಕ್ತಂಗಳಾಗದೆನಸುಂ ಕಣ್ಗಳ್ ||
ಭರಿತಭ್ರೂಕುಟಿ ಕಲಮಾ |
ಗಿರದೆ ಮುಖಂ ಗೆಲ್ದನಿಂತುವರಿನೃಪಬಲಮಂ || ೧೨೩||

(ಇಂತು ವಿಶೇಷಾಲಂಕಾರಂ)

### (೧೫) ಸಮಾಹಿತಾಳಂಕಾರಲಕ್ಷಣಂ.

ಪರಪಸದ ಬಗೆಯೊಳೊಂದಂ |
ದೊರೆಕೊಳಿಸುವುದಱಿಗತರ್ಕಿತೋಪಸ್ಥಾನಂ ||
ನಿರುತಂ ಸಮಾಹಿತಾಳಂ |
ಕರಣಾಂತರಮಕ್ಕುಮಿಂತು ತದುದಾಹರಣಂ || ೧೨೪||

ಲಕ್ಷ್ಯಂಗಳ್.

ಮುಳಿದಿರ್ದ ನಲ್ಲಳಲ್ಲಿಗೆ।
ತಿಳಿಪಲ್ ಪೋಪೆನ್ನ ಬಗೆಗೆ ದೊರೆಕೊಳೆ ಮತ್ತಿಂ॥
ತೆಳವೆಱಿ ಗಗನಾಂತರದೊಳ್।
ಪೊಳೆದತ್ತತ್ತಂ ವಸಂತ ಸಮಯೋತ್ತಂಸಂ॥ ೧೨೫॥

ಕಂ॥ ತಡೆತಡೆದು ಕಾಂತನಲ್ಲಿಗೆ।
ನಡೆಯಲ್ ಬಗೆದೆನಗೆ ಕಾರ ಕಾರಿರುಳೊಳ್ ಸ॥
ಯ್ತಡಿವಡಿಕೆಗಳಿಂ ತೊಡೆದ।
ತ್ತೆಡೆವಱಿಯದೆ ಪೊಳೆವ ಮಿಂಚು ಮುಗಿಲೆಡೆಯೆಡೆಯೊಳ್॥ ೧೨೬॥

(ಇಂತು ಸಮಾಹಿತಾಳಂಕಾರಂ)

(೧೬) ಸಮಾಸೋಕ್ತ್ಯಲಂಕಾರ ಲಕ್ಷಣಂ.

ತಱಿಸಂದು ಮನದೊಳೊಂದಂ।
ಪೆಱತಂ ಮತ್ತದನೆ ಪೋಲ್ವುದಂ ಕುಱಿಪುಗಳಂ॥
ಕುಱಿಮಾಡಿ ಮಾಡಿ ಪೇಳ್ವುದು।
ನೆಱಿಯೆ ಸಮಾಸೋಕ್ತಿ ಯೆಂಬುದಿಂತದಱ ತೆಱಂ॥ ೧೨೭॥

ಲಕ್ಷ್ಯಂಗಳ್.

ತಾಮರೆಯಲರೊಳ್ ಸರಸನಿ।
ಜಾಮೋದದೊಳೊಂದಿ ನಲಿದು ಮಕರಂದ [ರಜೋ]॥
ವ್ಯಾ[ಮುಗ್ಧದೊ] ಳೀ ಮುಗುಳೊಳ।
ಮಾಮಾಲಿಕ್ಕಿಯಿ ನಱಿಸಿ ಸುಱಿವುಹಳಿ ಕೆಲಗೆಲದೊಳ್॥ ೧೨೮॥

(1) ಲಕ್ಷ್ಯಲಕ್ಷಣಸಮನ್ವಯಂ.

ನೆರೆದಶಿವಿದಗ್ಧಗಣಿಕಾ।
ಸುರತಾಸವಸೇವನಾಕೃತೌಢನನಾಗಿ॥
ದಿರದೆ ತರುಣೀರತಾಂತರ।
ಸರಾಗಮಂ ಪೇಳ್ವುದಲ್ಲಿ ತುಂಬಿಯ ನೆವದಿಂ॥ ೧೨೯॥

(1) ಈ ಅಲಂಕಾರದಲ್ಲಿ ಲಕ್ಷ್ಯಲಕ್ಷಣ ಸಮನ್ವಯವು ಉಕ್ತವಾಗಿದೆ. ಇಲ್ಲಿಂದಮುಂದೆ ಹೀಗೆಯೇ ಸಮನ್ವಯವುಂಟು.

ಲಕ್ಷ್ಯಾಂತರಂ.

ದಾನಪರನಂ ನಿಜೋನ್ನತ।
ಮಾನನನಾರೂಢವಿಪುಳವಂಶನನಂತೊಂ॥
ಪಾನೆಯನಪಾಯಪಂಕದೊ।
ಳೀನುಂ ತಳ್ವಿಲ್ಲದಿರ್ದುದಂ ಕಾಣಿಸಿದಂ॥ ೧೩೦॥

ಲಕ್ಷ್ಯಲಕ್ಷಣ ಸಮನ್ವಯಂ.

ತ್ಯಾಗಾದಿಗುಣಗಣೋದಯ।
ಭಾಗಿಯನೇನಾನುಮೊಂದುಪಾಯಾಂತರಮಂ॥
ನೀಗಲ್ ನೆಱೆಯದೆಯನುಪಮ।
ನೀಗಣಿದದಿನಾನೆಮಾಡಿ ನುಡಿದಂ ಬಗೆಯಂ॥ ೧೩೧॥

[ಇಂತು ಸಮಾಸೋಕ್ತಿ]

(೧೭) ಪರ್ಯಾಯೋಕ್ತಾಲಂಕಾರಲಕ್ಷಣಂ.

ಬಗೆದರ್ಥಮನಱಿಪದೆ ಮೆ।
ಲ್ಲಗೆ ತಿರ್ದುವ ಬಗೆಯನದಱ ನೆಪದಿಂ ಪೇಱತಂ॥
ನಿಗದಿಸುವುದು ಪರ್ಯಾಯೋ।
ಕ್ತಗತಾಳಂಕಾರಮದಱ ಪಾಂಗಿಂತಕ್ಕುಂ॥ ೧೩೨॥

ಲಕ್ಷ್ಯಂ

ಕಂ॥ ನೀಮಿರ್ಬರುಮನ್ನೆಗ ವಿಂ।
ತೀಮಾಱಕ್ಕೆಯೊಳಿನಿಸುಪೊೞ್ತು ನುಡಿವೃತ್ತಿರಿಮಾ॥
ನಾವೋದಕುಸುಮಸವಿತಿಯ।
ನಾಮರಗಳೊಳಾಯ್ವು (ಕೊಯ್ವು) ವಿೞ್ಲಿಗೆ ಬರ್ಪೆಂ॥ ೧೩೩॥

---

(೧) ಕಾವ್ಯಾದರ್ಶದಲ್ಲಿ ಆದಿಯಿಂದಲೂ ಬಂದ ಪದ್ಯದಲ್ಲಿ ಲಕ್ಷ್ಯವನ್ನು ಹೇಳಿ ಮತ್ತೊಂದರಲ್ಲಿ ಲಕ್ಷ್ಯಲಕ್ಷಣ ಸಮನ್ವಯವನ್ನು ಮಾಡಿರುವನು. ಈ ಗ್ರಂಥದಲ್ಲಿಯಾದರೋ ಆ ಪದ್ಧತಿಯು ಇಲ್ಲಿಂದ ಮುಂದೆ ಬಂದೆರಡು ಅಲಂಕಾರದಲ್ಲಿ ಮಾತ್ರ ಇದೆ.

ಲಕ್ಷ್ಯಲಕ್ಷಣಸಮನ್ವಯಂ.

ಕೆಳದಿಯಮಭಿಮತ(ನು)ಮನೊ।
ಬ್ಬಳಿಗೂಡಿ ವಿದಗ್ಧೆ ಸುರತಸೇವನಮಂ ಮೊ ॥
ಕ್ಕಳಮವರ್ಗೆ ಮಾಡಲೆಂದಾ।
ಗಳೆ ಪೋಗಲ್ ಬಗೆದು ನುಡಿದಳಿಂತೀಮಾತಂ ॥ ೧೩೪॥

(ಇಂತು ಪರ್ಯಾಯೋಕ್ತಾಲಂಕಾರಂ)

(೧೮) ವಿರೋಧಾಲಂಕಾರಲಕ್ಷಣಂ.

ಒಂದೊಂದಱಿೊಳೊಂದದುವಂ।
ತಂದೊಬ್ಬಳಿಮಾಡಿ ತದ್ವಿಶೇಷಾಂತರಮಂ ॥
ಸಂದೇಹವಿಲ್ಲದಱಿಪುವು।
ದೊಂದೆ ವಿರೋಧಾಭಿಧಾನಮದುವಿಂತಕ್ಕುಂ ॥ ೧೩೫॥

ಲಕ್ಷ್ಯಂಗಳ್.

ಶರದಾಗಮದೊಳ್ ಕಳಹಂ।
ಸರವಂ ಪೆರ್ಚಿತ್ತು ಕಿವಿಗೆ ಸೊಗಯಿಸಿ ಪೀನಂ ॥
ವಿರಳತರಮಾಯ್ತು ಬರ್ಹಿಣ।
ವಿರಾವಮುರುಮುದವಿಗಾಮವಿರಸವಿರಾಗಂ ॥ ೧೩೬॥

ಮಲಯಾನಿಳನೆಸಕದಿನುದಿ।
ರ್ದಲರ್ಗಳ ಮಕರಂದಮಾಲೆಗಳ್ ಪರೆಪೆತ್ತಂ ॥
ನೆಲದೊಳ್ ಬಿಟ್ಟುಂ ಪಡೆದುವು।
ವಿಲೋಚನಾಂಬುಗಳನಗ್ಗಳಂ ವಿರಹಿಗಳಾ ॥ ೧೩೭॥

(ಉಪಸಂಹೃತಿ)

ದೊರೆಕೊಳ್ವಂತಿರೆ ಮುನ್ನಂ।
ವಿರೋಧಿಗತಮಾರ್ಗಭೇದಮಂ ತೋಱಿದೆನಾ ॥
ದರದಿನುಪಮಾದಿಗಳೊಳಂ।
ನಿರುತಮನುಕ್ತಮುಮನಱಿಗೆ ಲಕ್ಷ್ಯಾಂತರದೊಳ್ ॥ ೧೩೮॥

[ಇಂತು ವಿರೋಧಾಲಂಕಾರಂ]

(೧೯) ಅಪ್ರಸ್ತುತಾಲಂಕಾರಲಕ್ಷಣಂ.

ಪ್ರಸ್ತುತಮಲ್ಲದುದನೆ ವಿಗೆ।
ವಿಸ್ತಾರಿಸಿ ನೆಗೞ್ಚಿ ಪೇೞ್ದೊಡಕ್ಕುಂ ಮತ್ತ॥
ಪ್ರಸ್ತುತಮೆಂಬುದಲಂಕೃತಿ।
ವಿಸ್ತರವಿಂತಕ್ಕುಮದಱ ಲಕ್ಷ್ಯವಿಭಾಗಂ॥ ೧೩೯॥

ಲಕ್ಷ್ಯಂ.

ಕಂ॥ ಮೃಗಗಣಮೆ ಸುಖಂ ಬಾೞ್ಗುಂ।
ಸೊಗಯಿಸುವ ವನಾಂತರಾಳದೊಳ್ ಬಹುತೃಣದೊಳ್॥
ಬಗೆದಳಿಪಿ ಸುೞಿದು ನೋಡದೆ।
ಮೊಗಮಂ ವಸುಮದವಿರಾಮಕಲುಷಾಯತರಾ॥ ೧೪೦॥

ಲಕ್ಷ್ಯಲಕ್ಷಣ ಸಮನ್ವಯಂ.

ಸಂತಂ ಮೃಗಗಣವೃತ್ತಿಯ।
ನಿಂತಪ್ರಸ್ತುತಮನಱಿಪಿದಂ ಪರಸೇವಾ॥
ಚಿಂತಾವಿಷಾದಿತಾಂತ।
ಸ್ಸ್ವಾಂತಂ ಸಂತೈಸಲೆಂದು ತನ್ನಂ ತಾನೇ॥ ೧೪೧॥

[ಇಂತಪ್ರಸ್ತುತಾಲಂಕಾರಂ]

(೨೦) ನಿದರ್ಶನಾಲಂಕಾರ ಲಕ್ಷಣಂ.

ಗುಣದೋಷಾದಿಗಳಿಂದನು।
ಗುಣಮಾಗಿರೆ ಪೇೞ್ದು ತದನುಸದೃಶದಿನೊಂದಂ॥
ಪ್ರಣಿಹಿತನಿದರ್ಶನಕ್ರಮ।
ದೆಣಿಸುವುದಕ್ಕುಂ ನಿದರ್ಶನಾಲಂಕಾರಂ॥ ೧೪೨॥

ಲಕ್ಷ್ಯಂಗಳ್.

ಅಮಳಿನಗುಣವೃತ್ತಗಳಿಂ।
ಸಮುಪಸ್ಥಿತಸಕಳಜನರ್ಗಳುಪಚಿತಗುಣಮಂ॥
ಸಮನಾಗಿಸುವರ್ ಕನ್ನಡಿ।
ಕಮಸೀಯಾಕಾರಬಿಂಬಮಂ ತಾಳ್ದುವವೋಲ್॥ ೧೪೩॥

ಜನಮಱಿಯದನ್ನೆಗಂ ಮು।
ನ್ನೆ ನಯಮನಱಿದಱಿಪಲಾರ್ಪೊಡದು ಮಂತ್ರಿಗುಣಂ ॥
ಜನವಾದಂ ನೆಗೞ್ದ ನಗ।
ಧ್ವನಿವೋಲನುಕರಣವಾರ್ತೆ ಮಂತ್ರಿಯ ಗುಣಮೇ ॥ ೧೪೪॥

ತಲೆಸೊಡಿ ಮುನ್ನೆ ಕಜ್ಜದ।
ಫಲಮಂ ಬೆಸಗೊಂಡುಮೇವನಲ್ಲಿಂ ಬೞಿಯಂ ॥
ತಲೆಯಂ ಕಿರಿಯಿಸಿ ದಿವಸಮ।
ನಲಸದೆ ಬೆಸಗೊಳ್ವನಂತು ಗಾವಿಲನಕ್ಕುಂ ॥ ೧೪೫॥

ಪ್ರತಿಕೂಲನಾಗಿ ನಿಲೆ ವಿಧಿ।
ಮತನಯ ಮನುಕೂಲಮಾಗಿ ನಿಲೆಯುಂ ಕಾರ್ಯ ॥
ಸ್ಥಿತಿಯಂ ಸಾಧಿಸಲಾಗದು।
ಮೃತಕಕೃತೋಪಕೃತಿಯವೊಲನರ್ಥಾಯಾಸಂ ॥ ೧೪೬॥

ಕಂ॥ ಪದೆದುದಯಿಸಲೆಂದುಂ ಕಾ।
ಲದೊಳಲ್ಲದುದಾರತೇಜನರ್ಕನುಮಲ್ಲಂ ॥
ಸದುದಿತಗುಣನದಱಿಂ ನಯ।
ವಿದನಪ್ಪಂ ಕಾಲಮಂ ನೆರಂ ತ್ರೋರ್ಕೆ ನೃಪಂ ॥ ೧೪೭॥

ಪಡೆಯಱಿಯಲಾದೊಡಱಿಯಂ।
ಕಿಡಿಸುಗುಮಂತಃಕಳಂಕನೃಪಮಂಡಳಮಂ ॥
ತಡೆಯದೆ ತಮಸ್ಸ್ವಭಾವಂ।
ಕಿಡಿಸುವವೊಲಱಿದು ರಾಹು ಶಶಿಮಂಡಳಮಂ ॥ ೧೪೮॥

ಕಿಱಿದೆಂದೇಱಿಸಿ ಪಗೆಯಂ |
ಪಱಿಪಡೆ ಕಿಡಿಸದೊಡೆ ಪೆತ್ತು ಕಾಲದ ಬಲಮಂ ||
ನೆಱೆಪಱುಗುಂ ನೆಱೆದನುಪಿಂ |
ಮಱುಸುವವೊಲ್ ಉವಸಕರನಸಂಬುದಸಿವಹಂ || ೧೪೯||

ಒಳಗಿರ್ದ ವೈರಿಗಳ್ ವೊ |
ಕ್ಕಳಪೂಯುರ್ ಪೆರ್ಚಲಧಿಕವಿಭವರ್ಕಳುಮಂ ||
ತಳರದೊಡಸಿರ್ದು ಬಡವಾ |
ನಳನೆಂದುಂ ಪೆರ್ಚಲೀಯದಂತಂಬುಧಿಯುಂ || ೧೫೦||

ಪರಪಕ್ಷಮುಳ್ಳಿನಂ ತನ |
ಗಿರವೃಬ್ಬಸಮುದಱಿನಱಿವುದದನೇಗೆಯ್ದುಂ ||
ಪರೆದ ಪುಡಿಯೆಲ್ಲಮಂ ಸೀರ್ |
ನೆರೆದು ಕೆಸರ್ಮಾಡದನ್ನೆಗಂ ನೆಲಸುಗುಮೇ || ೧೫೧||

ಕುಱುಗೊಂಡು ನೆಗಳ್ವನಿಚ್ಛೆಯ |
ನಱಿಯದೆ ತನ್ನಿಚ್ಛೆಯಿಂದೆ ಕಜ್ಜಂ ಬೇೞ್ವಂ ||
ತಱಿಸಲಿಸಲಾಱನಾತ್ಮನ |
ಕೆಱನಱಿಯದೆ ಮದ್ದುವೇೞ್ವ ಬೆಜ್ಜನ ತೆಱದಿಂ || ೧೫೨||

ಪರಿಣಾಮಪಥ್ಯಮುಂ ಸುಖ |
ಪರಿಕರಮುಂ ಮೆಚ್ಚದನ್ನರಾರೋ ಮಾತಂ ||
ನಿರತಿಶಯರಸಸಮೇತಮ |
ನರೋಚಕಂ ಮೆಚ್ಚದಂತೆ ಸೊಗಯಿಸುವುಣಿಸಂ || ೧೫೩||

ಉಪಸಂಹೃತಿ

ಕಂ|| ಇಂತುದಿತಭೇದಮಂ ದೃ।
ಷ್ಟಾಳಂಕಾರಮಾರ್ಗಮಂ ಕನ್ನಡದೊಳ್॥
ಸಂತತ ಗುಣಮಂ ಕೆಯ್ಕೊ।
ಳ್ವಂತಾಗಿರೆ ಬಗೆದು ಪೇೞ್ದೆ ಪರಮಕವೀಶರ್॥ ೧೫೪||

(1) [ಇಂತು ದೃಷ್ಟಾಂತಾಳಂಕಾರಂ]

(೨೧) ಸಹೋಕ್ತ್ಯಲಂಕಾರಲಕ್ಷಣಂ.

ಗುಣಜಾತ್ಯಾದಿಗಳಿಂ ದೊರೆ।
ಯೆಣಿಸುವುದು ಸಹೋಕ್ತಿ ಯೆಂಬುದಕ್ಕುಂ ನಾನಾ॥
ಗಣನಾ ವಿಶೇಷಮಾಗೀ।
ಗಣಿದದಿನಾರಯ್ದು ಕೊಳ್ಗೆ ಲಕ್ಷ್ಯಮನದಱಾ॥ ೧೫೫||

ಲಕ್ಷ್ಯಂ.

ಅತಿಧವಳಮಾಯ್ತು ಗುಣಸಂ।
ತತಿಯೊಡನೆ ಯಶೋವಿತಾನಮಾಶಾಧೀನಂ॥
ಸತತಂ ಪೆರ್ಚಿತ್ತು ನಿಜಾ।
ಯತಿಯೊಡನೆ ಮಹಾವಿಭೂತಿ ಪರಮೋದಯನಾ॥ ೧೫೬||

[ಇಂತು ಸಹೋಕ್ತ್ಯಲಂಕಾರಂ]

(೨೨) ಸಂಕೀರ್ಣಾಲಂಕಾರಲಕ್ಷಣಂ.

ಸಂಕೀರ್ಣಮೆಂಬುದುಕ್ತಾ।
ಳಂಕಾರಸಮೂಹಸಂಕರಕ್ರಮಮಕ್ಕುಂ॥
ಶಂಕಾವಿರಹಿತಚಿತ್ತರ।
ದಂ ಕಾವ್ಯದೊಳಿಂತು ಪೇೞ್ದೆ ಕವಿವೃಷಭರ್ಕಳ್॥ ೧೫೭||

(1) ಈ ಅಲಂಕಾರದ ಹೆಸರನ್ನು ಮೊದಲು ನಿದರ್ಶನೆಯೆಂದು ಹೇಳಿ ಉಪಸಂಹೃತಿಯಲ್ಲಿ "ಇಂತು ದೃಷ್ಟಾಂತಾಲಂಕಾರ ಮಾರ್ಗಂ" ಎಂದು ಬೇರೆ ಹೇಳಿರುವುದಲ್ಲದೆ, 'ಇದು ಕನ್ನಡದೊಳ್ ಸಂತತಗುಣಮಂ ಕೈಕೊಳ್ವಂತಾಗಿರೆ ಪೇೞ್ದುದು' ಎಂದು ಇದಕ್ಕೆ ಕನ್ನಡದಲ್ಲಿ ಹೆಚ್ಚು ಪ್ರಾಶಸ್ತ್ಯವುಂಟೆಂದೂ ಹೇಳಿರುವನು. ದಂಡಿಯಲ್ಲಿ ನಿದರ್ಶನಾಭೇದವು ಇಷ್ಟು ವಿಶದವಾಗಿಲ್ಲ.

ಲಕ್ಷ್ಯಂ

ಅಪರಾಗಂ ಮುನಿಪತಿವೋಲ್ |
ಲಪಗತಗುಣನಾಗಿಯುಂ ನಿಜಾಯತಪೋಷಂ ||
ವಿಪುಳಯಶೋಧನಲೋಭಂ |
ನೃಪವೃಷಭನರಾತಿನಿಕರತರುದವದಹನಂ || ೧೫೮||

(ಇಂತು ಸಂಕೀರ್ಣಾಲಂಕಾರಂ)

(೨೨) ಪರಿವೃತ್ತ್ಯಲಂಕಾರಲಕ್ಷಣಂ.

ಪರಿವೃತ್ತಿ ಯೆಂಬುದಕ್ಕುಂ |
ನಿರುಪಮಮರ್ಥಸ್ವರೂಪವಿನಿಮಯವಚನಂ ||
ಪರಮಗುಣೋದಯಮುದಱಾ |
ಸ್ವರೂಪಮುಂ ಬಗೆದು ಕೊಳ್ಗೆ ಮತ್ತೀತೆಱದಿಂ || ೧೫೯||

ಲಕ್ಷ್ಯಂ.

ಅರಿಗೆ ದುರಾಹವರಂಗಾಂ |
ತರದೊಳಭೀತಂ ನಿಜಾರಿಸಮಿತಿಗಳಿಂದಂ ||
ನೆರೆದ ಜಯಂಗೊಂಡಾಗಡೆ |
ಸುರಾಂಗನಾ ಸುರತವಿಷಯಸುಖಮಂ ಕೊಟ್ಟಂ || ೧೬೦||

(೨೪) ವ್ಯಾಜಸ್ತುತ್ಯಲಂಕಾರಲಕ್ಷಣಂ.

ಅತಿಶಯಮಾಗಿರೆ ಗುಣಸಂ |
ತತಿಯುಂ ದೋಷಮನೆ ಪೇಱ್ವವೋಲ್ ಪೇೞ್ವುದು ನಿ ||
ತ್ಥಿತಶಬ್ದಾರ್ಥವ್ಯಾಜ |
ಸ್ತುತಿಯೆಂಬುದುಮುದಱ ಮಾಱ್ಕೆ ಮತ್ತಿಂತಕ್ಕುಂ || ೧೬೧||

ಲಕ್ಷ್ಯಂಗಳ್.

ಜಲರಾಶಿಪ್ರಭವೆಯನವಿ |
ಕಲಕೃಷ್ಣಗುಣಾನುಸಕ್ತೆಯುಂ ವಿಗೆ ಲಕ್ಷ್ಮೀ ||
ಲಲನೆಯನಾಂತುಂ ವಕ್ಷ |
ಸ್ಸ್ಥಲದೊಳ್ ಪೇೞಿಂತುದಾರಚರಿತನೆ ಅಪ್ಪೈ || ೧೬೨||

ಸತತಂ ಭುಜಂಗಭೋಗಾ !
ಶ್ರಿತೆ ನಿನ್ನ ಕಳತ್ರಮಿೞಧರಾವಧು ಮತ್ತಂ ॥
ತತಿಶಯದೆ ಮಹಾಪುರುಷ |
ವ್ರತಮಂ ತಾಳ್ದುವಳುದಾರಚರಿತಕ್ರಮದಿಂ || ೧೬೩||

[ಇಂತು ವ್ಯಾಜಸ್ತುತ್ಯಲಂಕಾರಂ]

(೨೫) ಹೇತ್ವಲಂಕಾರಲಕ್ಷಣಂ.

ಕಾರ(ಣ) ಮಾಗಿರ್ಪುದಳಂ |
ಕಾರಂ ಹೇತೂಕ್ತಿಯೆಂಬುದದು ತಾಂ ನಾನಾ ||
ಕಾರಂ ಜ್ಞಾಪಕ ಸದಳಂ |
ಕಾರಸುಮಾರ್ಗಪ್ರಯೋಗಮಿೞತೆಱಿನದಱಾ || ೧೬೪||

ಲಕ್ಷ್ಯಂಗಳ್.

ಇಂದುಕಿರಣಂಗಳಿಂದಂ |
ಚಂದನರಸದಿಂದೆ ಮಾಗಿಯಾ ನೀರಿಂದಂ ||
ನಂದದು ಪರಿತಾಪಾನಳ |
ನಿಂದಱಿದೆಂ ನಿನ್ನ ಮೆಯ್ಯ ಕಾಮಜ್ವರಮಂ || ೧೬೫||

ಅಱಿವುಳ್ಳವಱೊಳ್ ಬೆರಸದು |
ದಱಿಂದ ಮಱಿಯದರೊಳಪ್ಪ ಪರಿಚಯದಿಂದಂ ||
ನೆಱಿಯಿಂದ್ರಿಯಮಂ ಗೆಲ್ಲದು |
ದಱಿಂದಮುಕ್ಕುಂ ಜನಕ್ಕೆ ಪೀನಂ ಬೆಸನಂ || ೧೬೬||

ಬೆಳದೊಱಗಿದ ಕಟಿವೆಗಳುಂ ||
ತಿಳಿಗೊಳದೊಳಗಲರ್ದ ಸರಸಿಜಪ್ರತತಿಗಳುಂ ||
ಕಳಹಂಸೆಗಳ್ಗೆ ಕೋಮಳ |
ವಿಳಾಸವತಿಗಳ್ಗೆ ಪಡೆಗುಮೊಸಗೆಯ ನಾಗಳ್ || ೧೬೭||

ಕಂ|| ತಿಳಿಗೊಳಗಳುಮಮಳಾಶಾ ।
ವಳಯಮುಮತಿಧವಳಜಳದ ಜಳಧರಪಥಮುಂ ||
ತೊಳಪೆಳವೆಱಿಯುಂ ತಳೆದುವು ।
ಮುಳಿಸಂ ಕಾಮಿಗಳ ಚಿತ್ತದೊಳ್ ನೆಲಸಿದುದಂ || ೧೬೮||

(ಇಂತು ಹೇತ್ವಳಂಕಾರಂ)

### (೨೬) ವಿಭಾವನಾಳಂಕಾರಲಕ್ಷಣಂ.

ಕಾರಣಮನಱಿಪೆ ನಿಜಸಂ ।
ಸ್ಕಾರಗುಣಾತಿಶಯದೊಳ್ ತಗುಳ್ಚುವುದಕ್ಕುಂ ||
ಸಾರಂ **ವಿಭಾವನಾಳಂ** ।
ಕಾರಂ ಮತ್ತದಱ ಲಕ್ಷ್ಯಮಿಂತೆಱನಕ್ಕುಂ || ೧೬೯||

### ಲಕ್ಷ್ಯಂ.

ಸಮಱುಗೆಯಿಲ್ಲದ ಮಱುಕಮು ।
ಮಮರ್ದಿರೆ ಕೆಯ್ಗೆಯ್ಯದೊಪ್ಪುವಂದಮುಮವಳಾ ||
ಸೆವಮಿಲ್ಲದ ದರಹಸಮುಂ ।
ಸಮುಚಾಲಸಲಲಿತಗಮನಮುಂ ಸೊಗಯಿಸುಗುಂ || ೧೭೦||

(ಇಂತು ವಿಭಾವನಾಳಂಕಾರಂ)

### (೨೭) ಲೇಶಾಲಂಕಾರಲಕ್ಷಣಂ.

ಗುಣದೊಳ ಮಱಿಪುವುದಿನಿಸವ ।
ಗುಣಮುಂ ದೋಷದೊಳವಿನಿಸುಗುಣಮುಂ ತಂದು ||
ವರ್ಣಿಸುವುದು **ಲೇಶಮೆಂಬುದು** ।
ಗಣಿಪದಿನಿಂತಕ್ಕುಮದಱ ಲಕ್ಷ್ಯವಿಭಾಗಂ || ೧೭೧||

### ಲಕ್ಷ್ಯಂಗಳ್.

ಮಾನಿಯು ಮುದಾರಚರಿತನು ।
ಮಾನಿತನಿಪುಣಕನುಂ ಮನಸ್ವಿಯುಮಿಂತಾ ।
ಮಾನಸರನಾರುಮುಂ ಮನ ।
ಕೇಸುಂಮುಟ್ಟಲ್ಲನಂತು ಒಗೆವುದು ಶೋಷಂ || ೧೭೨||

ಕುಲಜನುಮಲ್ಲಂ ನಣ್ಪಿನ।
ಬಲಮುಂ ತನಗಿಲ್ಲ ಕಣ್ಗ ಮೇೞಿದನಾರೊಳ್॥
ನೆಲಸಿರನೆಲ್ಲಿಯುಮನ್ನವಿಂ।
ಚಲವೆಂದುಂ ಪತ್ತುವಿಡದದೊಂದುಂಟು ಗುಣಂ॥ ೧೭೩॥

(ಇಂತು ಲೇಶಾಲಂಕಾರಂ)

(೨೮) ಉದಾತ್ತಾಲಂಕಾರಲಕ್ಷಣಂ.

ಮಿಗೆ ಮನದ ಪೆಂಪುಮಂ ಕೈ।
ಮಿಗೆ ವಿಭವದ ಪೆಂಪುಮಂ ವಿಶೇಷಿಸಿ ಪೇೞಲ್॥
ಬಗೆವುದುದಾತ್ತಾಲಂಕಾ।
ರಗುಣೋದಯಮದಱಿದಿಂತು ಸದುದಾಹರಣಂ॥ ೧೭೪॥

ಲಕ್ಷ್ಯಂಗಳ್.

ಕಂ॥ ಚಲದೆಡೆಗೆ ಪಿರಿದು ರಜಮುಂ।
ನೆಲನುಂ ಪ್ರಿಯದೆಡೆಗೆ ಕಿಱಿದು ಕೊಳಲುಂ ಕುಡಲುಂ॥
ಚಲಮುಂ ಪ್ರಿಯಮುಂ ಬೞಿ ಸಮ।
ಬಲಮಾಗಿರೆ ನೆಗೞ್ವ ಬಗೆಗೆ ಕಿಱಿದೇಂ ಪಿರಿದೇಂ॥ ೧೭೫॥

ಅೞಿದೞಿಪಿ ಬೞಿಯ ನುೞಿಯದೆ।
ಪೞಿವರುಮಂ ತವಿಸಿ ಕೆೞಿಯದುೞಿವಳನಾದಂ॥
ಪೞಿಕೆಯ್ದು ತೊೞ್ತು ನುೞಿದಂ।
ತುೞಿದ ಮಹಾಪುರುಷರಱಿಯದುೞಿದರೆ ಸಿರಿಯಂ॥ ೧೭೬॥

ಕಸವರಮೆಂಬುದು ನೆಱೆ ಸೈ।
ರಿಸಲಾರ್ಪೊಡೆ ಪರವಿಚಾರಮುಮಂ ಧರ್ಮಮುಮಂ॥
ಕಸವೇಂ ಕಸವರಮೇನು।
ಬ್ಬಸಮಂ ಬಸಮಲ್ಲದಿರ್ದು ಮಾಡುವರೆಲ್ಲಂ॥ ೧೭೭॥

ಪಾೞಿ ನಿಲೆ ನೆಗೞ್ತೆ ಬಾೞ್ವುದು ।
ಬಾೞಿಂಬುದು ನಿಕ್ಕುವಂ ಗುಣಗ್ರಾಮಣಿಗಳ್ ॥
ಪಾೞಿಯೊಳಗೆ ತೆಗೞ್ತೆ ಬಾೞ್ವಾ ।
ಬಾೞ್ತೇನಾಚಂದ್ರತಾರವೋ ಮಾನಸರಾ ॥ ೧೩೮॥

ಪೊಲ್ಲಮೆಯುಂ ಗುಣಮುಂ ತಮ ।
ಗಲ್ಲದೆ ಪುದುವಲ್ಲ ಮತ್ತೆ ತನಗುಂ ಪೆಱರ್ಗಂ ॥
ಸಿಲ್ಲದೆ ಜನಮುಂ ತಾಗಿಯು ।
ಮೆಲ್ಲಂ ಮುನಿಸೊಸಗೆ ವೆರಸು ಪೞಿಗುಂ ಪೊಗೞ್ಗುಂ ॥ ೧೩೯॥

ಮಿಗೆ ಪೞಿವರೆನ್ನನೆನ್ನದೆ ।
ಪೊಗೞ್ವರ್ ನೆರೆದೆಲ್ಲರೆನ್ನನೆನ್ನದೆ ತನ್ನೊಳ್ ॥
ಬಗೆದುಭಯಲೋಕಹಿತದೊಳ್ ।
ನೆಗೞ್ತೆ ಜನಂ ಪೞಿಗೆ ಪೊಗೞ್ತೆ ತನಗೇನದಱಿಂ ॥ ೧೪೦॥

ಪ್ರಣತಾರಿ (1) ತ್ರುಟಿತಮುಕ್ತಾ ।
ಮಣಿಗಳ್ ಮಾತ್ರಾಂಕದಿಂ ಕಲಿಲ್ವುದರೆ ಸಭಾಂ ॥
ಗಣವೊಪ್ಪೆ ವೀರನಾರಾ ।
ಯಣನಾ ತಾರಕಿತನಭದವೋಲ್ ಸೊಗಯಿಸುಗುಂ ॥ ೧೪೧॥

ಕಂ॥ ಪರಚಕ್ರಭೂಪರಟ್ಟಿದ ।
ಕರಿಗಳ್ ಬಿಡುತರ್ಪ ಮದದ ಪೊನಲಿಂದೆತ್ತಂ ॥
[ನರಲೋಕ ಚಂದ್ರನಾ] ಮಂ ।
ಏರದೊಳಗೆಲ್ಲಕಾಲಮುಂ ಕೆಸಱಕ್ಕುಂ ॥ ೧೪೨॥

(ಇಂತುದಾತ್ತಾಲಂಕಾರಂ)

(1) ತ್ರುಟಿತ ಎಂಬಲ್ಲಿ ತ್ರು ಎಂಬಕ್ಷರಕ್ಕೆ ಶೈಥಿಲ್ಯವನ್ನು ಹೇಳಬೇಕು. ಇದು ವ್ಯಾಕರಣಶುದ್ಧವಲ್ಲ.

(೨೯) ಅಪಹ್ನುತ್ಯಲಂಕಾರಲಕ್ಷಣಂ.

ಅತಿಶಯಿತವಸ್ತುವಿಷಯ ।
ಪ್ರತೀತಿಯಂ ಮಱಸಿ ನಿಱಿಸಿ ಪೇೞ್ವುದು ಪೆಱತಂ ॥
ಸತತಮುಪಹ್ನುತಿ ಸದಳಂ ।
ಕೃತಿ ಮತ್ತಿಂತಕ್ಕುಮುದಱ ಲಕ್ಷ್ಯವಿಕಲ್ಪಂ ॥ ೧೮೩॥

ಲಕ್ಷ್ಯಂಗಳ್.

ಅಮೃತಮಯಕಿರಣನೆಂಬುದು ।
ಮಮರದು ಶಿಶಿರಾಂಶುವೆಂಬುದುಂ ಶಶಿಗೆಂದುಂ ॥
ಸಮನಿಸಿ ವಿಷಕಿರಣನುಮನ ।
ಲಮರೀಚಿಯುಮೆಂದೆನಲ್ಕೆ ಮೋಹಾಪೋಹಂ ॥ ೧೮೪॥

(ಮೋಹಾಪೋಹಂ)

ಕುಸುಮಂಗಳೆಂಬ ಮಾತದು ।
ಪುಸಿ ದಹನಮಯಂಗಳಂಬುಗಳ್ ಮನಸಿಜನಾ ॥
ಜನಮಱಿಯೆ ಸುಡುವುದೆರ್ದೆಯಂ ।
ಬಿಸಿಯವಿವೆಂದಿಂತೆ ಪೇೞ್ದ ಧರ್ಮಾಪೋಹಂ ॥ ೧೮೫॥

(ಧರ್ಮಾಪೋಹಂ)

ಸ್ಮರನಸ್ತ್ರಸಮಿತಿಯದು ನಿ ।
ರ್ಭರಮಂಗಮನುರ್ಚಿ ಪೋಗೆಯುಂ ಪೋಬಱಯಂ ॥
ದೊರೆಕೊಳಿಸಲಾಗದದಱಿಂ ।
ಶರತತಿಯಲ್ತೆಂಬುದಿಂತು ಧರ್ಮಾಪೋಹಂ ॥ ೧೮೬॥

(ಧರ್ಮಾಪೋಹಂ)

ಸ್ಮರನೈದಂಬುಗಳಲ್ಲಿವು ।
ಶರಕೋಟಿಗಳಿಲ್ಲದಾಗಳಿಂತೀ ಲೋಕಾಂ ॥
ತರವರ್ತಿ ವಿರಹಿಗಣಮಂ ।
ಸಿರುತಂ ಮರ್ದಿಸುವವನೆನೆ ಸುಗುಣಾಪೋಹಂ ॥ ೧೮೭॥

(ಸುಗುಣಾಪೋಹಂ)

[ಇಂತಪಹ್ನುತ್ಯಲಂಕಾರಂ]

### (೩೦) ರಸವದಲಂಕಾರಂ.

ನವವಿಧರಸಂಗಳಂ ಮನ।
ಕೆವರೆ ನಿರೂಪಿಸುವವಚನವಿರಚನೆ ರಸವ॥
ತ್ಯವಿಧಾಲಂಕಾರಂ ಕುಱಿ।
ತು ವಿಕಲ್ಪಿಸಿ ತೋರ್ಪೆನವಱ ಲಕ್ಷ್ಯಕ್ರಮಮುಂ॥ ೧೮೮॥

### ರಸಭೇದಂಗಳ್.

ಕಂ॥ ವೀರಾದ್ಭುತಕರುಣಾಸ್ಯಂ।
ಗಾರಭಯಾನಕಸರೌದ್ರ ಬೀಭತ್ಸಮಹಾ॥
ಸಾರತರಹಾಸ್ಯ ಶಾಂತಾ।
ಧಾರಂ ನವವಿಧವಿಕಲ್ಪಮಾರಸಮಾರ್ಗಂ॥ ೧೮೯॥

ರಾವಣನಂ ಕೊಂದು ಜಯ।
ಶ್ರೀವಧುವಂ ತಾಳ್ದಿ ಮುಯ್ಪಿನೊಳ್ ವರಸೀತಾ॥
ದೇವತೆಯಂ ತರ್ಪನ್ನೆಗ।
ನೋವಪ ಪುರುಷಬ್ರತೋಚಿತಂ ವೀರರಸಂ॥ ೧೯೦॥
(ವೀರರಸಂ)

ಜಲನಿಧಿಯಂ ಪಾಯ್ದೊರ್ವನೆ।
ಸಿಲಿಕಿ ದಶಾನನ ಪೊಱಲ ನಾಲಂಕೆಯನಾ॥
ಕುಲವಿಲ್ಲದಿಱಿದು ನಿಂದಂ।
ಕಲಿಯಾಂ ಬಗೆದು ನೋಱೆಪ್ಪೊಡದ್ಭುತಮಾದಂ॥ ೧೯೧॥
(ಅದ್ಭುತರಸಂ)

ಕರಕರೆದು ಮನೋಧೃತಿಯಿಂ।
ಸೆರೆವಾಸೆಯೊಳಿರ್ದಳಲ್ಲದುಱಿದೊಡೆ ನಿನ್ನಾ॥
ವಿರಹಾನಳನಾತಾಪದೆ।
ಕೊರಗುಗುವಿನ್ನಾಕೆಗಿನಿಸು ಕರುಣಿಸು ಮನದೊಳ್॥ ೧೯೨॥
(ಕರುಣರಸಂ)

ಪುಳಕಿತಕಪೋಳಫಳಕಂ |
ವಿಳಸಿತಮದಿರಾರುಣೇಕ್ಷಣಂ ಸ್ಫುರಿತೋಷ್ಠಂ ||
ಕೆಳದೀ ನಿನ್ನ ಮುಖಂ ತಳ |
ಮಳಗೊಳಿಸುಗುಮಿಂತು ನಿಭೃತಶೃಂಗಾರಂ (1) || ೧೯೩||

(ಶೃಂಗಾರರಸಂ)

ತಾಳತರುವಿತತಿಯೊಳ್ ಬೇ |
ತಾಳಂಗಳ್ ಮೊಱೆದು ತೆಱೆದು ಬಾಯ್ಗಳನಾಪಾ |
ತಾಳಬಿಲಂಗಳವೋಲ್ ತಳ |
ತಾಳಲಯಕ್ರಮದೆ ಕುಣಿಯೆ ಭಯಮುಯನಾದಂ || ೧೯೪||

(ಭಯಾನಕರಸಂ)

ಕೊಂದು ಜಟಾಯುವನಾತಂ |
ಮುಂದಿಟ್ಟಾ ಜನಕಸುತೆಯನೊಯ್ದಂ ಮತ್ತಾ ||
ಪಂದೆಯನಂತಕಮುಖದೊಳ್ |
ತಂದಿಟ್ಟಂದಲ್ಲದುಱಿಗುಮೋ ರೌದ್ರರಸಂ || ೧೯೫||

(ರೌದ್ರರಸಂ)

ಕಂ|| ನವವಿವರಾವೃತಪೂತ |
ದ್ರವತ್ವಗಾವೃತವಿಮಿಶ್ರಮಾಂಸೋಪಚಿತಂ ||
ಧ್ರುವಮಸುಚಿತ್ರಭ್ರಮಿತ |
ಕ್ರಿವಹಂ ಮೆಯ್ ಬಗೆವೊಡಿಂತು ಕಿಸುಗುಳಮಾಡಂ || ೧೯೬||

(ಬೀಭತ್ಸರಸಂ)

ಪರಪುರುಷಸೇವನಾಕೃತ |
ಸುರತವಿಕಾರಂಗಳೆಲ್ಲಮಂ ನಿಜಪತಿಯೊಳ್ ||
ನೆರೆಬಾಗಳೆ ಮಱೆಯಲ್ ಬಗೆ |
ಬರವದು ನಗಿಸಿತ್ತು ಪೀನಮಭಿಸಾರಿಕೆಯಾ || ೧೯೭||

(ಹಾಸ್ಯರಸಂ)

(1) ಮದ್ರಾಸ್ ಲೈಬ್ರರಿ ತಾಳಪತ್ರಪ್ರತಿಯಲ್ಲಿ ಇಲ್ಲಿಯವರೆಗೆ ಮಾತ್ರವಿದೆ. ಮುಂದಿನ ಪತ್ರಗಳು ಗಳಿತವಾಗಿವೆ.

[ಮೃಗಗ] ಣದೊಳ್ ಪರಿಚಿತಮಂ |
ದ್ವಿಗುಣಮದೇಂತೆ ಮಟ್ಟುವಿರ್ದಪು ಮತ್ತಂ ||
ವಿಗತವಿಕಾರಾಕಾರಂ |
ಸೊಗಯಿಸುಗುಂ ನಿನ್ನ ರೂಪು ಶಾಂತಾಧಾರಂ || ೧೯೮||

(ಶಾಂತರಸಂ)

(೩೧) ಉರ್ಜಿತಾಳಂಕಾರಲಕ್ಷಣಂ.

ಆರೂಢನಿಜಮನೋಹಂ |
ಕಾರೋತ್ಕರ್ಷಪ್ರಕಾಶ ಮೂ | ರ್ಜಿತಸದಳಂ ||
ಕಾರಂ ತದಿ[ಯ ಭೇದ] ವಿ |
ಚಾರಮನೀತೆಱದಿನಱಿದು ಕೊಳ್ಗೆ ಕವೀಶರ್ || ೧೯೯||

ಕೊಲ್ಲೆಂ ಬಿಸುಡಾಯುಧಮಂ |
ಪುಲ್ಲಂ ಕರ್ಚೆಱು ಪುತ್ತನಡಿಗೆಱಗೆನ್ನಾ ||
ನಿಲ್ಲದೆ ತೊಲಗಿದಿರಿಂದಂ |
ತಲ್ಲದೊಡೆಱ್ಱಾದರ್ಪ ಕೆಯ್ದುಗೆಯ್ ನೀನೀಗಳ್ || ೨೦೦||

(೩೨) ವ್ಯಾವೃತ್ತ್ಯಲಂಕಾರಲಕ್ಷಣಂ. 2

ಮಗುಱ್ದುಂ ಮ[ತ್ತಿನ] ಮಾತಂ |
ನೆಗಱ್ದಿರೆ ಪೇಱ್ಱಾಗಳಕ್ಕುಮಾ ವ್ಯಾವೃತ್ತಿ ||
ಸ್ವಗತಾಳಂಕಾರಂ ಬಗೆ |
ಗಗಾಥಮನರದಱ ತೆಱನನೀಕುಱಿಪುಗಳಿಂ || ೨೦೧||

ಲಕ್ಷ್ಯಂಗಳ್.

ವಿರಹಂ ಪರಿತಾಪಮನಾ |
ಪರಿತಾಪಮುಮುಳಿಪನಳಿಪು [ಮಾ] ವಲ್ಲಭನೊಳ್ ||
(ನೆರೆ) ದಿರ್ಪ ಬಗೆಯನಾನೆರೆ |
ವಿರವುಂ ಸುರತಾನುರಾಗಮುಂ ಪೆರ್ಚಿಸುಗುಂ || ೨೦೨||

(1) ಮೂರ್ಜಸ್ವಿದಳಂ-ಎಂಬಪಾಠವು ಪೂರ್ವಾಚಾರ್ಯಸಮ್ಮತಪಾಠವು.
(2) ಈ ಅಲಂಕಾರವನ್ನು ದಂಡಿಯು ಹೇಳಿಲ್ಲ.

ನುಡಿಯಂ ತಗುಳ್ಚೆ ನೋಟಂ ।
ನುಡಿ ಪರಿಚಯಮಂ ತಗುಳ್ಚೆ ಪರಿಚಯಮುಳಿಪಂ ॥
ತಡೆಯದೆ ತಗುಳ್ಚೆ ಮನದಳಿ ।
ಪೊಡಗೂ [ಡಿದು] ದಂ ತಗುಳ್ಚುಗುಂ ಕಾಮಿಗಳಾ ॥ ೨೦೩॥

(೩೩) ಪ್ರಿಯತರಾಲಂಕಾರಲಕ್ಷಣಂ.

ಪ್ರಿಯಕುಶಲಪೂರ್ವಕೋಚಿತ ।
ನಯವಿನಯೋದಾರರುಚಿರವಚನಪ್ರಾಯಂ ॥
ಪ್ರಿಯತರಮೆಂಬುದು ಸಕಳ ।
ಕ್ರಿಯಾನುಗಮಿತಾರ್ಥಮಿಂತು(ತ)ದುದಾಹರಣಂ ॥ ೨೦೪॥

ಲಕ್ಷ್ಯಂ.

ಗು [ರುಜನ] ದ ಪರಕೆಯುಂ ಬಂ ।
ಧುರಪುಣ್ಯಫಳಾನುಬಂಧಮುಂ ನೆರೆದೆನ್ನೊಳ್ ॥
ಪರಮಾನುಭಾವಭರಮುಂ ।
ದೊರೆಕೊಂ (ಡು) ವಪಿಂದು ಬರವಿನೊಳ್ ನಿಮ್ಮಡಿಯಾ ॥ ೨೦೫॥

(೩೪) ಆಶೀರಲಂಕಾರಲಕ್ಷಣಂ.

ದೊರೆಕೊಂಡು ಮನದ ಬಗೆಯುಂ ।
ಪಿರಿದಾಗಿರೆ ಪಿರಿಯರೊಸಗೆಯುಂ [ಬಗೆದಂ] ದುಂ ॥
ಪರಮಾಶೀರರ್ಥಾಳಂ ।
ಕರಣಾಂತರಮದಱ ಲಕ್ಷ್ಯಮಿೂತೆಱನಕ್ಕುಂ ॥ ೨೦೬॥

ಲಕ್ಷ್ಯಂ.

ಆಯುಂ ಶ್ರೀಯುಂ ವಿಜಯಮು ।
ಮಾಯತಿಯುಂ ನೃಪತಿ ನಿನಗೆ ನಿಜಸಂತತಿಯುಂ ॥
ನ್ಯಾಯದೆ ಪೆರ್ಚುವುದಕ್ಕೀ ।
ತೋಯಧಿಧರ[ಣೀಧ] ರಾಧರಸ್ಥಿತಿವರೆಗಂ ॥ ೨೦೭॥

(೩೫) ಭಾವಿಕಾಲಂಕಾರಂ.

ಗೀತಿಕೆ|| ಭಾವಮೆಂಬುದಕ್ಕುಂ ಕವಿಗಳಾ |
ಭಾವಿಸಿ ಮನದ ಬಗೆಯೊಂದಿದರ್ಥಂ ||
ಕೇವಳಮದಱಿಂ[ಳ] ಳಂಕೃತಿ |
ಭಾವಿಕಮೆಂಬುದಕ್ಕುಂ ನೃಪತುಂಗದೇವಮತದಿಂ || ೨೦೮||

(೩೬) ಧ್ವನ್ಯಳಂಕಾರಂ.

ಕಂ| ಧ್ವನಿಯೆಂಬುದಳಂಕಾರಂ |
ಧ್ವನಿಯಿಸುಗುಂ ಶಬ್ದದಿಂದಮರ್ಥದೆ ದೂಷ್ಯಂ ||
ನೆನೆವುದಿದನಿಂತು ಕಮಳದೊ |
ಳನಿವಿಷಯುಗವೊಪ್ಪೆ ತೋರ್ಪುದಿಂತಿದು ಚೋದ್ಯಂ || ೨೦೯||

(ಮಹಾಕಾವ್ಯನಿಷ್ಠಮಾದ ಅಷ್ಟಾದಶವರ್ಣನೆಗಳ ವಿವರಣಂ).

ಮಾಲಿನೀವೃತ್ತಂ|| ಅತಿಶಯಮಿತಿಹಾಸೋಪಾಶ್ರಯಂ ಮೇಣ್ ಕಥಾವಿ |
ಶ್ರುತಚತುರವಿ [ಕಾ] ಶೋತ್ಪಾದಿತಾರ್ಥೋತ್ಕರಂ ಮೇ ||
ಣತಿಕುಶಲಬಲೀಲಾಚಾರಲೋಕೋಪಕಾರೋ |
ದಿತಪರಮಗುಣೈಕೋದಾರಧೀರಾಧಿಕಾರಂ || ೨೧೦||

ಪರಮಸುಖಪದಶ್ರೀಧರ್ಮಕಾಮಾರ್ಥಮೋಕ್ಷ |
ಸ್ಥಿರವಿಷಯವಿಶೇಷಾಖ್ಯಾನವಿಖ್ಯಾತತತ್ವಂ ||
ಪುರಜನಪದಶೈಲಾದಿತ್ಯಚಂದ್ರೋದಯಾಸ್ತಂ |
ತರಸಮೃಗಗಣಬ್ಯಾವರ್ಣನಾನಿರ್ಣಯಾರ್ಥಂ || ೨೧೧||

ಸಮುದಿತಕುಸುಮಾವೋದೋದಯೋದ್ಯಾನಲೀಲಾ |
ಕ್ರಮವಿಹಿತಜಲಕ್ರೀಡಾವಿನೋದಾದಿನೀತಂ ||
ಪ್ರಮದಮದನಮಾದ್ಯದ್ಯಾವನೋದ್ಯಾನರಾಮಂ |
ರಮಣ ರಣಿ(ತ) ಗೋಷ್ಠೀಬಂಧಸಂಧಿಪ್ರಬಂಧಂ || ೨೧೨||

ವಿವಿಧವಿಭವಶೋಭಾರಂಭಲಂಭಪ್ರಲಂಬೋ।
ದ್ಭವವಿಹಿತವಿವಾಹೋತ್ಸಾಹ ಸಾಕಲ್ಯಕಲ್ಪಂ॥
ಪ್ರವರನೃಪಕುಮಾರಾತ್ಮೋದಯಾವಿಃಪ್ರಮೋಧಾ।
ಸವಸಮುದಿತಸೇವಾರಾತಿವೃತ್ತಾಂತವೃತ್ತಂ॥ ೨೧೩॥

ನಯವಿನಿಮಯನಾನಾಮಂತ್ರದೂತಪ್ರಯಾಣಾ।
ಕ್ಷಯಸಮಯವಿಳಾಸೋಲ್ಲಾಸಿ ಸಂಗ್ರಾಮಿತಾಂಗಂ॥
ಭಯವಿರಹಿತವೀರ್ಯಾದಾರ್ಯಗಂಭೀರಕಾರ್ಯಾ।
ಶ್ರಯವಿಶದಗುಣಶ್ರೀನಾಯಕೋತ್ಕರ್ಷವೇದ್ಯಂ॥ ೨೧೪॥

ವಿಳಸಿತಸದಳಂಕಾರಾದಿಸಂಸಾಧಿತಾರ್ಥಂ।
ಕುಳವಿದಿತಪದೋದ್ಯತ್ಕೋಮಳಾಳಾಪಶೀಳಂ॥
ಸುಳಲಿತಗುಣನಾನಾವೃತ್ತಜಾತಿಪ್ರವೃತ್ತಾ।
ಸ್ಖಳಿತರಸವಿಶೇಷೋಪಾಶ್ರಯ ಶ್ರೀನಿವೇಶಂ॥ ೨೧೫॥

ನಯವಿದುಚಿತಯುಕ್ತಿವ್ಯಕ್ತಿಲೋಕಪ್ರತೀತ್ಯಾ।
ಶ್ರಯಸಕಳಕಳಾಲೀಲಾಕರಾಲ್ಪೋಪಜಲ್ಪಂ॥
ನಿಯತಸಮಯಸಾರಾಸಾ(ರಾ)ಧನೀಯಾದಿತಾರಾ।
ನ್ವಯಪರಮತಪೋನುಷ್ಠಾನಮಿಷ್ಟಾರ್ಥಸಿದ್ಧಂ॥ ೨೧೬॥

ವಿಗತಮಳಮುಪಾತ್ತಾರಾತಿ ಲಾ(ಸಾ) ರ್ಥಾರ್ಥವೀರಂ।
ಸ್ಥಗಿತಮಮಿತನಾನಾಶಬ್ದವೀಚಿಪ್ರಸಂ (ಪಂ)ಚಂ॥
ನಿಗದಿತಗುಣರತ್ನೈಕಾಕರಾ (ರಂ) ಸಾಗರಂಬೋಲ್।
ಸೊಗಯಿಸಿ ಧರಣೀ [ಚಕ್ರಾಂಬ]ರಾಕ್ರಾಂತಮಕ್ಕುಂ॥ ೨೧೭॥

ತಿಕೆ॥ ಇಂತು ವಿಕ್ಕ ವರ್ಣನೆಗಳ್ ।
ಸಂತತವೊಂದಾಗಿ ಪೇಲ್ದು ಕಾವ್ಯಂ ಧರೆಯೊಳ್॥
ಸಂತತಿ ಕ್ಷಡದೆ ನಿಲ್ಕುಮಾಕ ।
ಲ್ಪಾಂತಂಬರಮನೋಘವರ್ಷಯಶಂಬೋಲ್ ॥　　೨೧೮॥

ಗ್ರಂಥೋಪಸಂಹೃತಿ.

ನೃಪತುಂಗ ಸಭಾಸದಪ್ರಶಂಸೆ.

ದ್ರುತವಿಳಂಬಿತಂ॥ ಸಕಳಲೌಕಿಕಸಾಮಯಿಕೋರುವೈ ।
ದಿಕವಿಶೇಷವಿವೇಕಪರಾಯಣಂ ॥
ಪ್ರಕಟಿತೋಕ್ತಿವಿವಿಕ್ತಿಕಳಾಕಳಾ ।
ಪಕಷ್ಟುಬಾಹಿತಸಾಹಿತವಿದ್ಯೆಯೊಳ್ ॥　　೨೧೯॥

ಅತಿಶಯುಪ(ನ)ತಿಭಾವಿಭವಂ ಮಹಾ ।
ಚತುರವೃತ್ತಿ ನಿತಾಂತಮನಾಕುಳಂ ॥
ಪ್ರತಿಪತರ್ಕತಲ್ಲಕ್ಷಣಲಕ್ಷ್ಯ(ಸಾ) ।
ಶ್ರಿತಮುದಾ ನೃಪತುಂಗಸಭಾಸದಂ ॥　　೨೨೦॥

*ವೃ॥ ಭಾಷಿಸಲ್ ಬಗೆದವಂ ಪಿಗೆ ಜಾಣನಶೇಷಭಾ ।
ಷಾವಿಶೇಷವಿಷಯಾತಿಶಯಾಮಳಕೌಶಳಂ ॥
ದೇವತಾಗುರುಗುಣೋದಯವೃದ್ಧಜನೋಪಸಂ ।
ಸೇವನಾಪರನಪಾಕೃತವೈಕೃತಚಾಪಳಂ ॥　　೨೨೧॥

*ವೃ॥ ಪರಮಕಾರು(ಣ್ಯ)ಣಿಕನಪ್ಪನಪಾಕೃತಪೋಷನಾ ।
ದರಮನಾಗಿಸುವನಪ್ಪನಶೇಷಜನಂಗಳೊಳ್ ॥
ಪರಗುಣಾ (ಸ, ಹ)ನಲ್ಲದನಾತ್ಮಗುಣೋದಯಾಂ ।
ತ..ನ...ಪನ...ಲಿ..ಗ...... ...ಪರಾಯಣಂ ॥　　೨೨೨॥

* ಈ ವೃತ್ತಗಳ ಹೆಸರು ಪ್ರಸಿದ್ಧವಾಗಿರುವ ಛಂದೋಗ್ರಂಥಗಳಲ್ಲಿಲ್ಲ.

ಮಂಗಲವೃತ್ತಂ|| ಬಗೆದು ಮೇಣ್ ಪರಮಧರ್ಮಮನರ್ಥಿಯಿನನ್ವಯ |
ಪ್ರಗ(ತಿ)ಣಿತಾಭ್ಯುದಯಮೋಕ್ಷಸುಖಾಶ್ರಯಹೇತುವಂ ||
ನೆಗಟ್ದು ಮೇಣುದಿತನಿರ್ಮಳಕೀರ್ತಿವಿತಾನಮಂ |
ಜಗದಗಾಧವಿವರೋದರದೀಪವಿಕಲ್ಪಮಂ || ೨೨೩||

ಗೀತಿಕೆ|| ಕೂಡೆ ಪೇೞ್ದು ನುತಕಾವ್ಯಮನಿಂತಭಿಮಾನಿ ತಾ(ಂ) ನಿ(ರ) |
ಗೀಡಿತಮಹಾಪುರುಷವೃತ್ತನಿತ್ತಿ ತಂ ||
ಕೂಡದಂತೆ ಪೆಱರೊ ಮೆಚ್ಚಿ ನೋಳ್ಕೆಱಿನಪ್ಪೊಡಂ |
ನೋಡ಼ದಂ ಕುಱಿತಾವನನ್ಮೇನುಮಂ || ೨೨೪||

*ವೃ|| ಅಂತು ಬಿೞ್ದು ತೆಱದಿಂ ವರಗೀತಗುಣೋದಯ್ಯ |
ಕಾಂತ..........ವಿಷಯಾಶಯರಾಗಿ ನಿರಾಕುಳಂ ||
ಸಂತತಂ ನುಡಿಗಳೊಳ್..........
..........ಬಗೆದು ಪೇೞ್ವುದುದಾರ ಕವೀಶ್ವರಂ || ೨೨೫||

ಗೀತಿಕೆ|| ಪಾರ್ಥಿವಲೋಕನಪ್ಪನೆಂದುಂ ಕವಿ ವರ್ಣಕಂ |
ಸ್ವಾರ್ಥಚಯಂ ನುತಸರಸ್ವತೀ ||
ತೀರ್ಥಾವತಾರ ಮಾರ್ಗನೆಸಕಂ |
................................|| ೨೨೬||

*ವೃ|| ಕುಲಜಾತಿ ದೇಶವಿಶದಂ ವಿನಯೋಪಚಾರಂ |
ನಿಲಯೈಕ ವೃತ್ತಿ..........
ವಿಲಸದ್ಗುಣಾಗುಣವಿವರ್ತಿ ಗುರೂಪದೇಶಾ |
ಮಲಿನಾವಬೋಧವಿದಿತಾಖಿಳಚೋದ್ಯವಿ[illegible]ಂ || ೨೨೭||

* ಈ ವೃತ್ತಗಳ ಹೆಸರು ಈಗ ಪ್ರಸಿದ್ಧವಾಗಿರುವ ಛಂದೋಗ್ರಂಥಗಳಲ್ಲಿಲ್ಲ.

ಮದನಮಾನಮಾಯಭಯಲೋಭವಿಷಾದ ಹರ್ಷಾ |
ಭ್ಯುದಿತಾಂತರಂಗರಿಪುವರ್ಗಜಯಾವತಾರಂ ||
ವಿದಿತ......ವಿಭವ ಭಾವಿತ ವಿಶ್ವಲೋಕಂ |
ಬುಧಗೋತು ಕಾವನನುನೀತಗೃಹೀತವಾಕ್ಯಂ || ೨೨೮||

ಪರಮಾನುಭಾವನಭಿಮಾನಿ ವಿನೋದಶೀಲಂ |
ಪರಸತ್ಯದಾರಚರಿತೋದಯನೇಕರೂ[ಪಂ] ||
ಸರಸಾಪ್ರಿಯಪ್ರವರಮೂರ್ತಿ ಪರೋ[ಪಕಾರಂ] |
ನಿರುತಂ ಗುಣೋದಯನಕಾರಣಧುರ್ಯಮಿತ್ರಂ ||

ಅಪಹಾಯಸಾಹಸವಿನೋದ ವಿವಿಕ್ತಚಿತ್ರ |
ಪ್ರಸವ ಪ್ರಕಾಶಿತಮಹೋದಯತತ್ವಸತ್ವ ||
ವ್ಯಸನವ್ಯಪೇತಮುಪನೀತಕಲಾಕಲಾಪಂ |
[ಸ]ಕಲ ಖಂಡನಿಮ್ಮಲಯಶೋಪಪಿಧಾವತಂಸಂ || ೨೩೦||

ಪೃಷ್ಟಿತಾಗ್ರವೃತ್ತಂ|| ಪರಿವೃತ ನೃಪತುಂಗ ದೇವಮಾರ್ಗಂ |
ತರಗತಬೋಧವಿಶೇಷಯಾನಪಾತ್ರಂ ||
ಪರಮಗುಣಪರೀತಕಾವ್ಯರತ್ನಾ |
ಕರದುರುಪಾರಮನೆಯ್ದುಗುಂ ಮಹಾತ್ಮಂ || ೨೩೧||

*ಕಂ|| ದ್ವಿಪ್ರಾಸಂಸಭಂಗಂ ದ್ವಂ |
ದ್ವಪ್ರಾಸಂ ಕಾವ್ಯರಚನೆ (ಗುಚಿ) ತ (ಮೆ) [ನಿ] ಪ್ಪಾ ||
ತ್ರಿಪ್ರಾಸಂ [ಸಲೆಯಂತಾ |
ದಿಪ್ರಾಸಂ] ಬೇಡಿರ ನಾಲ್ಕುತೆಱನಾಗಿರ್ಕುಂ || ೨೩೨||

---

* ಈ ಪ್ರಾಸವಿಚಾರವು ಗ್ರಂಥದ ಉಪಸಂಹಾರಸ್ಥಳದಲ್ಲಿ ಉಕ್ತವಾಗಿರುವುದು ಅಸ್ಥಾನೋಕ್ತದೋಷಕ್ಕೆ ಗುರಿಯಾಗಿರುವುದು. ಆದುದರಿಂದ ಇದನ್ನು ಆಧುನಿಕರು ಸೇರಿಸಿರಬಹುದು. ಹಾಗಿಲ್ಲದಿದ್ದರೆ ಈ ಭಾಗವು ಎರಡನೆಯ ಪರಿಚ್ಛೇದದ ೪೩ ನೆಯ ಕಂದದ ಮುಂದಾದರೂ ಇರಬೇಕು.

† ಅರಸರೊಳೆಲೆ ನೀಂ ಸರಸಮು ।
ನರಸಿಯುವೊಲಾಡುತಿರ್ಪೆ ನಿನಗಿದು ಗುಣಮೇ ॥
ಅರಸರ್ ಸರಸಮನಱಿವರೆ ।
ಸರಸಮನಾಡರಸರಲ್ಲದವರೊಳ್ ಮಗಳೇ ॥ ೧೩೩॥

* ಒಂದೊಂದಱ ಸೌಂದರ್ಯಮ ।
ನೊಂದೊಂದೀಕ್ಷಿಸಲೊಡರ್ಚೆ ನಾಸಿಕಮಡ್ಡಂ ॥
ಒಂದಂದಮನೀಕ್ಷಿಸಿ ಪೆಱ ।
ಗಿಂ[ದಂ] ದೀಕ್ಷಿಸು [ವು] ವವಳ ಸಿಡಿಯಸಳ್ಗಣ್ಗಳ್ ॥ ೧೩೪॥

ನುಡಿಸಿದನೆನ್ನಂ ನಲ್ಲಂ ।
ಬಿಡಿಸಿದನೆನ್ನಂತರಂಗದನುತಾಪಮನೊ ॥
ಲ್ದುಡಿಸಿದನುಳ್ಳೊಳ್ಳುಡೆಯುಂ ।
ತುಡಿಸಿದನೆನಗರಕೆಯುಪ್ಪ ಮಣಿಭೂಷಣಮುಂ ॥ ೧೩೫॥

ಗೀತಿಕೆ॥ ತಾರಾಪತಿವತ್ಕೀರ್ತಿವಿಹಾರಾ ।
[ಹಾರ] ಪ್ರಭಯಾ ನಿಜತನುಪೂರಾ ॥
ಪೂರಾಶ್ರಿತಹೃತ್ಕ್ಲೇಶವಿದೂರಾ ।
ದೂರೀಕೃತ ಬಲವಿಸ್ತಾರಾ ॥ ೧೩೬॥

ವ॥ ಇವು ಕ್ರಮದಿಂ ದ್ವಿಪ್ರಾಸ, ದ್ವಂದ್ವಪ್ರಾಸ, ತ್ರಿಪ್ರಾಸ ಅಂತಾದಿಪ್ರಾಸ ಈ ನಾಲ್ಕುಬೇಱು ಅನ್ಯಮಾರ್ಗ್ಗಲಕ್ಷಣಂ

† ಇದು ಶಬ್ದಾನುಶಾಸನದಲ್ಲಿ ಉದ್ಧೃತವಾಗಿದೆ.

* ಇದು ಲೀಲಾವತೀ ಕಾವ್ಯದಲ್ಲಿದೆ. ಆದರೆ ಉತ್ತರಾರ್ಧದ ಪಾಠವು ತುಂಬಾವ್ಯತ್ಯಸ್ತವಾಗಿರುವುದು. (ಆ. 3. ಪ. 42).

ವೃ|| ನಿರವದ್ಯಾನ್ವಯನುದ್ಧಮುದ್ಧತನು [ಹಾಕ್ಷೀ]ರಾಬ್ಧಿ ಡಿಂಡೀರದಾಂ |
ಡುರಮಾಕ್ರಾಂತ ಸಿ[ಸು]ಶೈಲಸಾಗರಧರಾಶಾಚಕ್ರವಾಳಂಬರಂ ||
ಪರಮಶ್ರೀವಿಜಯಪ್ರಭೂತಿಜಯಶ[ಂ]ಸ್ತ್ರೀಬಾಲವೃದ್ಧಾಹಿತಂ |
ಪರಮಾನಂದಿತಲೋಕವೊಪ್ಪೆ ನೆಲೆಗೊಳ್ಗಾಚಂದ್ರತಾರಂಬರಂ || ೨೩೭||

ಇದು

ಪರಮ ಸರಸ್ವತೀ ತೀರ್ಥಾವತಾರ ನೃಪತುಂಗ ದೇವಾನುಮತ

ಮಪ್ಪ

**ಕವಿರಾಜಮಾರ್ಗದೊಳ್**

ಅ ರ್ಥಾ ಲಂ ಕಾ ರ ಪ್ರ ಕ ರ ಣಂ

ತೃತೀಯ ಪರಿಚ್ಛೇದಂ



**ಕವಿರಾಜಮಾರ್ಗಾಲಂಕಾರಂ**

ಸಮಾಪ್ತಂ.



# ಪರಿಶಿಷ್ಟ ೦-೧.

## ನೃಪತುಂಗ, ದಂಡಿ, ಭಾಮಹ ಇವರುಗಳು ಹೇಳಿರುವ ಅರ್ಥಾಲಂಕಾರಗಳ ಹೆಸರು, ಸಂಖ್ಯೆ ಕ್ರಮ ಇವುಗಳ ತಾರತಮ್ಯವನ್ನು ತೋರಿಸುವ ಪಟ್ಟಿ.

| ಕವಿರಾಜಮಾರ್ಗದಲ್ಲಿ ಹೇಳಿರುವಂತೆ ಅಲಂಕಾರಗಳ | | ಕಾವ್ಯಾದರ್ಶದಲ್ಲಿ ಹೇಳಿರುವಂತೆ ಅಲಂಕಾರಗಳ | | ದಂಡಿಯು ಹೇಳಿರುವುದಕ್ಕೆ ಪ್ರತಿಯಾಗಿ ಕವಿರಾಜಮಾರ್ಗದಲ್ಲಿಯ ಹೆಸರು, ಸಂಖ್ಯೆ. | | ಭಾಮಹನು ಹೇಳಿರುವ ಅಲಂಕಾರಗಳ. | |
|---|---|---|---|---|---|---|---|
| ಸಂಖ್ಯೆ. | ಹೆಸರು. | ಸಂಖ್ಯೆ. | ಹೆಸರು. | | | ಸಂಖ್ಯೆ. | ಹೆಸರು. |
| 1 | ಜಾತಿ | 1 | ಸ್ವಭಾವಾಖ್ಯಾನಂ | 1 | ಜಾತಿ | ... | ಇಲ್ಲ |
| 2 | ರೂಪಕಂ | 2 | ಉಪಮಾ | 7 | ,, (ಉಪಮಾನಂ) | 3 | ... |
| 3 | ಅರ್ಥಾಂತರವಿನ್ಯಾಸಂ | 3 | ರೂಪಕಂ | 2 | ,, | 1 | ... |
| 4 | ಅತಿರೇಕಂ (ವ್ಯತಿರೇಕ) | 4 | ದೀಪಕಂ | 6 | ,, | 2 | ... |
| 5 | ಯಾಥಾಸಂಖ್ಯಂ | 5 | ಆವೃತ್ತಿಃ | 32 | ವ್ಯಾವೃತ್ತಿ (ಆವೃತ್ತಿ) | ... | ಇಲ್ಲ |
| 6 | ದೀಪಕಂ | 6 | ಆಕ್ಷೇಪಃ | 10 | ,, | 4 | ... |
| 7 | ಉಪಮೆ (ಉಪಮಾನಂ) | 7 | ಅರ್ಥಾಂತರನ್ಯಾಸಃ | 3 | ಅರ್ಥಾಂತರವಿನ್ಯಾಸ | 5 | ... |
| 8 | ಅತಿಶಯಂ | 8 | ವ್ಯತಿರೇಕಃ | 4 | ಅತಿರೇಕ (ವ್ಯತಿರೇಕ) | 6 | ... |
| 9 | ಸದೃಶಯೋಗಿತೆ | 9 | ವಿಭಾವನಾ | 26 | ,, | 7 | ... |
| 10 | ಆಕ್ಷೇಪಂ | 10 | ಸಮಾಸೋಕ್ತಿಃ | 16 | ಸಮಾಸೋಕ್ತಂ | 8 | ... |
| 11 | ಶ್ಲೇಷಂ | 11 | ಅತಿಶಯೋಕ್ತಿಃ | 8 | ಅತಿಶಯಂ | 9 | ... |
| 12 | ಉತ್ಪ್ರೇಕ್ಷೆ | 12 | ಉತ್ಪ್ರೇಕ್ಷಾ | 12 | ,, | 11 | ... |

| | | | | | | | |
|---|---|---|---|---|---|---|---|
| 13 | ಸೂಕ್ಷ್ಮಂ | 13 | ಹೇತುಃ | 25 | ,, | 29 | ಇಲ್ಲ |
| 14 | ವಿಶೇಷಂ | 14 | ಸೂಕ್ಷ್ಮಃ | 13 | ,, | ... | ಇಲ್ಲ |
| 15 | ಸಮಾಹಿತಂ | 15 | ಲವಃ | 27 | (ಲವ) ಲೇಶ, | ... | ಇಲ್ಲ |
| 16 | ಸಮಾಸೋಕ್ತಂ | 16 | ಕ್ರಮಃ | 5 | ಯಾಥಾಸಂಖ್ಯಂ | ... | ಯಾಥಾಸಂಖ್ಯ |
| 17 | ಪರ್ಯಾಯೋಕ್ತಂ | 17 | ಪ್ರೇಯಃ | 33 | ಪ್ರಿಯತರಂ | 10 | ... |
| 18 | ವಿರೋಧಂ | 18 | ರಸವತ್ | 30 | ,, | 12 | ... |
| 19 | ಅಪ್ರಸ್ತುತಂ | 19 | ಊರ್ಜಸ್ವಿತ್ | 31 | ಊರ್ಜಿತಂ | 13 | ... |
| 20 | ನಿದರ್ಶನಂ | 20 | ಪರ್ಯಾಯೋಕ್ತಂ | 17 | ... | 14 | ... |
| 21 | ಸಹೋಕ್ತಿ | 21 | ಸಮಾಹಿತಂ | 15 | ... | 15 | ಇಲ್ಲ |
| 22 | ಸಂಕೀರ್ಣಂ | 22 | ಉದಾತ್ತಂ | 28 | ... | ... | ... |
| 23 | ಪರಿವೃತ್ತಿ | 23 | ಅಪಹ್ನುತಿಃ | 29 | ... | 16 | ... |
| 24 | ವ್ಯಾಜಸ್ತುತಿ | 24 | ಶ್ಲೇಷಃ | 11 | ... | 17 | ಶ್ಲಿಷ್ಟ |
| 25 | ಹೇತು | 25 | ವಿಶೇಷಃ | 14 | ... | 18 | ವಿಶೇಷೋಕ್ತಿ |
| 26 | ವಿಭಾವನೆ * | 26 | ತುಲ್ಯಯೋಗಿತಾ | 9 | ... | 19 | ಸದೃಶಯೋಗಿತಾ |
| 27 | ಲವಂ (ಲೇಶಂ) * | 27 | ವಿರೋಧಃ | 18 | ... | 21 | ಅಪ್ರಸ್ತುತ ಪ್ರಶಂಸಾ |
| 28 | ಉದಾತ್ತಂ | 28 | ಅಪ್ರಸ್ತುತಸ್ತೋತ್ರಂ | 19 | ಅಪ್ರಸ್ತುತಂ | 20 | |
| 29 | ಅಪಹ್ನುತಿ | 29 | ವ್ಯಾಜಸ್ತುತಿಃ | 24 | ... | 22 | ... |
| 30 | ರಸವದಲಂಕಾರಂ | 30 | ನಿದರ್ಶನಾ | 20 | ... | 23 | ... |
| 31 | ಊರ್ಜಿತಂ * | 31 | ಸಹೋಕ್ತಿಃ | 21 | ... | 24 | ... |
| | (ಊಜಸ್ವಿದಲಂಕಾರ) | | | | | 25 | |
| 32 | ವ್ಯಾವೃತ್ತಿ (ಆವೃತ್ತಿ) | 32 | ಪರಿವೃತ್ತಿಃ | 23 | ... | | ... |
| 33 | ಪ್ರಿಯತರ | 33 | ಆಶೀಃ | 34 | ... | 26 | ... |

* ಸಂಗ್ರಹ ಸ್ಥಳದಲ್ಲಿ ಲವ ಎಂದೂ ಲಕ್ಷಣವನ್ನು ಹೇಳುವಲ್ಲಿ ಲೇಶ ಎಂದೂ ಬೇರೆಬೇರೆ ಹೆಸರನ್ನು ಹೇಳಿರುವನು.

| ಕವಿರಾಜಮಾರ್ಗದಲ್ಲಿ ಹೇಳಿರುವಂತೆ ಅಲಂಕಾರಗಳ. | | ಕಾವ್ಯಾದರ್ಶದಲ್ಲಿ ಹೇಳಿರುವಂತೆ ಅಲಂಕಾರಗಳ. | | ದಂಡಿಯು ಹೇಳಿರುವುದಕ್ಕೆ ಪ್ರತಿಯಾಗಿ ಕವಿರಾಜಮಾರ್ಗದಲ್ಲಿಯ ಹೆಸರು, ಸಂಖ್ಯೆ. | | ಭಾಮಹನು ಹೇಳಿರುವ ಅಲಂಕಾರಗಳ. | |
|---|---|---|---|---|---|---|---|
| ಸಂಖ್ಯೆ. | ಹೆಸರು. | ಸಂಖ್ಯೆ. | ಹೆಸರು. | | | ಸಂಖ್ಯೆ. | ಹೆಸರು. |
| 34 | ಆಶೀಃ | 34 | ಸಂಕೀರ್ಣಂ | 22 | ... | 27 | ... |
| *35 | ಭಾವಿಕಂ | 35 | ಭಾವಿಕಂ | 35 | ... | 28 | ... |
| 36 | ಧ್ವನಿ | ... | ಇಲ್ಲ | ... | ... | ... | ಇಲ್ಲ |
| | | | | | | 30 | ಸಂದೇಹ |
| | | | | | | 31 | ಅನನ್ವಯ |
| | | | | | | 32 | ಉಪಮೇಯೋಪಮಾ |

*35, 36 ನೆಯ ಈ ಅಲಂಕಾರಗಳು ಅಲಂಕಾರಗಳ ಹೆಸರನ್ನು ಹೇಳಿರುವ ಕಂದಪದ್ಯಗಳಲ್ಲಿ (ಪರಿ. III. ಪ. 2. 3. 4.) ಹೇಳಿಲ್ಲ. ಆಸ್ಥಳದಲ್ಲಿ 34 ಅಲಂಕಾರಗಳನ್ನು ಮಾತ್ರ ಹೇಳಿರುವನು.—36. (ಧ್ವನಿ) ಇದನ್ನು ದಂಡಿಯೂ ಹೇಳಿಲ್ಲ, ಭಾಮಹನೂ ಹೇಳಿಲ್ಲ,

† ಭಾಮಹನು ಜಾತಿ, ಆವೃತ್ತಿ, ಲವ, (ಲೇಶ,) ಹೇತು. ಸೂಕ್ಷ್ಮ, ಸಮಾಹಿತ, ಈ ೬ ಅಲಂಕಾರಗಳನ್ನು ಹೇಳಿಲ್ಲ. ಸಂದೇಹ, ಅನನ್ವಯ, ಉಪಮೇಯೋಪಮಾ, ಈ 3 ಅಲಂಕಾರಗಳನ್ನು ಹೆಚ್ಚಾಗಿ ಹೇಳಿರುವನು.

ದಂಡಿಯು ಹೇಳಿರುವುದು—35 ಅಲಂಕಾರಗಳು.

ನೃಪತುಂಗಾನುಮತೋಕ್ತವಾದುದು. 34 ಅಥವಾ 36 ಅಲಂಕಾರಗಳು.

ಭಾಮಹನು ಹೇಳಿರುವುದು 32 ಅಲಂಕಾರಗಳು.



# ಪರಿಶಿಷ್ಟಂ, ೨.

## A
### (ಭಿನ್ನಪಾಠಗಳು)

ಮೈಸೂರ್ ಓರಿಯೆಂಟಲ್ ಲೈಬ್ರೆರಿ ಪುಸ್ತಕ.

No. 125.
(ಟಿಕಾರ ಇದೆ)

I.

ಶ್ರೀಮತೇರಾಮಾನುಜಾಯ ನಮಃ.

1. ನಾವನನಗಲಳ್.
2. ಶಯಥವಲಂ,
3. ವನ್ನೆF, ಹಂಸವಿಭಾವದೆ.
6. ನೇಕವಿವೇಕ...ತಪ್ಪಂ.
7. ಮೃಗಪತಿ, ರೊಳಮ ಪ್ರತಿಹತವ ಜನ.
9. ಆದರಿಂ.
10. ಒಡಜನಮು ... ಯಲ್ಕೆಯತುದೆಂ ವುವಲ್ತೆ.
11. ಮತಿಭಾವತ್ವ..ತಕ್ಕಂ...ಯಿಂ.
13. ......ಅದರ.
14. ಕೃತಿಯೊಳಿಡುವನಂ
19. ಲವ್ರುಕಿಕಸಾಮ್ಯೆಕೋ
24. ವಿವಿಧಮೆನಿಕ್ಕು
28. ಸಾಮ್ಯೆಕಾವಿ
29. ನೆಗಳ್ತೆಗವ್ಯಾ
32. ನುಡಿಗೆಲ್ಲಂ—(ಎಂಬಕಂದಲಿಲ್ಲ)
34. ಬೆದಂಡಗಬ್ಬ
35. ಮತ್ತಂ ದಲ್ ಗೀತಿಕೆ
41. ಪಾಗದಮುವನಕ್ಕಂ...
    ಅವರವಐ ಲಕ್ಷ್ಯ
43. ನೆದೆವೆತ್ತ
44. ದಾಗದುಮುಬಾರ
45. ಕಾಣೆಗೆಯ್ದುಂ
46. ದೇಸೆಬೇಱ3
49. ರವನೆನೆ ಬೆಳ್ಪಡೆಯದು
50. ರಸಿಕತ್ರೆಯೊಳ್
54. ಸಿತಪ್ತತ್ರಂ.
63. ದೂರಮೆಡೆತುನಮಪೂFರಂ
64. ರೇತಾತಿತೀವ್ರ
66. ವಿದಿದಾFದುF
72. ವಿಪರೀತಮುನದ್ಧು ಮಾಡುಗು
73. ಪೋಱಿರ್ದೂಡ......
    ಲಡಲಡಿಸಿ ದಲಸಡಂ......
75. ದೇಸೆಯನೆ
83. ಹರ ವಿಂನ್ನ (ಮಾತ್ರಕೆಯಲ್ಲಿ ಹೇಗೆ ಸ್ಥಳಬಿಟ್ಟಿದೆ)
84. ದಪತಾತ್ಥFಂ— ದೀ ಷ್ಯಾಂತಂ
85. ದಳ್ತಿ ಎ
86. ದ್ವೇತಿಯ ನುದೇತಿ—
    ಳೆಯFಥಾಸಂ—
87. ಬುಧ ತತಮುದಱಿಪ
88. ದೊಳಗೆನಂ—ನಿಂ ವೋ
89. ವೊಂದು ದೊಳ್ಸಂ—
91. ಥಿಪ—ತ್ರ್ವತ್ಯೇ—ಯಂ
    —ಲ್ಕೆ ದರ್ಸಂ
94. ನೆಸಿಂನನ
95. ವಿಸಂಧಿ ಎಂಬು—
96. ತಿರ್ಪF ಅಗಳ್ತಾ
98. ತರೆಯಂತಕ್ಕಂ
100. ಸಂಖ್ಯೆ 100 ಇದೆ 99 ಇರಬೇಕು
101. ದಲಿಲ್ಲದದುಮುಮನಱಿ
103. ದರದರೆ...

104. ಮತ್ತಾಗ ವಚನಂ
106. ಕ್ರಮವಿ ವ್ಯಕ್ತಂನ್ಯಾಯ
107. ವಿಪಿಷ್ಟಜನ
109. ಭೇದಂ ಱಕ್ಕು
110. ವರನಾಷ್ಟಾರ್ಧಿ—ಕರ್ತೃಗೆ
111. ಇಂತಿಂ ನಂತಾತ್ಮಕ
112. ವಧುವ ಪೇಸದೆ—
114. ದಯಾವಚನ ದಿಂದೆ ಯೆ
115. ನಿತವನೀಶ—ರನಾಥಿಯೆ—
116. ಣಿಪ್ಪವಕ್ಕೆ—ಳ್ಳರಿಣಿಪ್ಪವಕ್ಕೆ
117. ಮನುಗದರಿಂ—ಕಾರಣವಿಭಕ್ತಿ
118. ಬಂದಱ ಪಾವುಡಂ—
119. ಭಾಗಮುಂ—ಯರ್ಕಸಂಖ್ಯಾ
120. ವಲೆ—ಕುದು ಱಱಿ
121. ಕ್ತಿಮಾಡಿಬಂದಿದೆಯು ಮೆಕವಾ ಕುಕಾವ್ಯ
122. ನೊದುಲಿ ಮುಂ—ಕಲ್ತದಂ ಮಂತರೆ
123. ಪನಂ ಸುಭಟ—
124. ಳ್ಗಳಂ — ಳಿಯುಂ—ಬೆಳ್ಗಗೆ—ಗನಾ ನಮನಂ
126. ಮಣಿವಿಭೂಷಣಂ—ಅರಮೆ—ದೋಷಮುಂ ವಿಶೇಷ
127. ಗುರುದ್ಯೋಗ—ದೆಂಬುದು||—ನಂಬುಗೀಲಾ ವದೋಷ
128. ಬಗೆದವನಾವನೊದನಟ್ಟದೆ—ಮರಿಮಾನಸ—ರೆಗೆಮೆಂನ ನರ್ಪಿ ಬಾಱಿದೆ—ನವನಂದವಂ
129. ಳ್ಕೆ ತವಿತೆಱ—
130. ಮೆಲ್ಲಮೆಳರಲೆ — ಪಾಡಱಿವಂದ ಮಂ
131. ಬೇಱಿವೆರೆ — ಕೀಱಲ್ಲಿಯ ಷ ಮಾ
132. ದ್ಧರುನಾರತಂ--ಮುಂ ವರಬಗೆಯ
133. ಗೊರವರುಂ ಗುಣವೃದ್ಧಮುಂ ಯಕ್ಕುಪಿತದೋರು
134.—ತಗುಳ್ತು—ಱ ಳ್ದವಗುಣಂ--ವೆಂಪಂಣಿದೊ—
135.—ರೆಲ್ಲರ ಮಂತೆಬ— ಸಂಕಿಸದೆ ನಂಬು ಮಿಕ್ಕ.
136. ಪಳಿಯಿಗೆ—ನೆವವಿದೊಡಿಂತು.
137. ವಿಕಲ್ಪದೊಲೆಱದೊಳೆ.
138. ದ್ರುತವಿಳಂಬಿತಂ — ಮಿದಾಯ ತವಧಾರಣ—
139. ಕುಲನೀತನೆ—ನೆಲಸವೀಯ.
143.—ಕ್ರಮದಾ ತುಳ್ ಜಳದ—ಹರಂ|| ನಿಯಮಿ—ದುಪವಪ್ರತಿ —ದಳ್ತಿ ಇನಿರ್ದು—ರ್ಯಾಯ ಮಿದಭ್ಯುಪಗವೋ ಜಳದ ಸಂ ಹತಿ ಯಂತಿರೆ—ಹವಂ|| ಉಪಮಿ
146. ಕ್ರಮದಕ್ಕು—
147. ಕ್ರಮನಮನಾಭ.
148.—ಥವಳೋರ್ವಿಶೋ ತಾಳಂ.
149.—ಮಿಗಲಿಂದ ನಾಳ್ಬಡಿ—ಳ್ದುದು—
150.—ಳಾಪಕಳಾಪಕಥಿತ—

(ಆಶ್ವಾಸಾಂತ್ಯಗದ್ಯದಲ್ಲಿ)

ವರ್ಣನಾನಿರ್ಣಯಂ.

## ಪರಿಚ್ಛೇದಂ. II.

3. ಪೇಳ್ವೆ ಮಾಳ್ಕೆ.
6. ಕೂಸಿಕತ್ತಲೆಯೊಳ್,
7.—ದೂ ತಿಯಂಬರಿಸಿ—
9.—ತಂಸಂ ಪೇಳ್ದೊ—
12. ಮೇಣ್ಪೆಱಂ—
13. ಸ್ವಯವರಂ— ನಪವಾದು ವಾದ ರನ—
15. ಯೊಳಮೂಱ—ನಾತುಗೆ—
19. ರಣೆಯೊಳೆಥೆಷ್ಟಮಳಿದೆಡೆ—
20.—ಡೆತ್ತ.
26. ವಿಶೇಷದೊಳಾಪ್ಪೋದ್ದೇಶ.
28. ಷಣಗುಣ—ಡಂಕಚಾರಣೆ ಗಳಂ ಪಂತಂ.
31. ಸಾತೋಪ—
32. ಮೂಡಱ ದಿನ—ದಾವ್ರದದನ— ಕ್ರಮದಿವಿಚಾರಿತೆೋರು—
31.— ದಿಂಬಿನೆ— ಲಿರ್ದಂ— ಸಿಂತೆ ಕಳಿದು ಪೋದ ,,
32.—ಪುತ್ರಿಕೆಯಲಿ—
44.—ತಱಿಸಲದೊಡಾ ನೀನೆಲಕೆಲ್ಲಂ ಪಾವನೀಯ ಚರಿತನೆಯಾ ದೆಂ||೬೭ ಸುಕುಮಾರತರಾಕ್ಷರ.
71—ಕೆರಲ್ಯಕಳೆದುದು—
74.—ವಿಸಿಹರತಿ—
75.—ದಿಗಳಿಂ—ಳಿ ಸಿ.
76.—ಸಿಜ ಹುಯುಗವಿ.
77.—ದೊಳಟಿಮ—ಸೆ ತ್ತ ಬುದಾ.
79.— ಳೆಪ್ಪಿವಕ್ಕೆ — ಗದುಮೂ ಳಱಪಾಂ ತಕ್ಕಂ.
80. ಇದದಕ್ಷಿ—ರ್ಗ ದೀಜ್ಯ— ವಿಶೇಷ್ಯಣ—
82.—ಯುಗಂಗಳ್.
84. ಎಂದಿಂತೆ—ದಾಗಿ ಗಿಪೇೞ್ದಿ — ಸಿಸಿಲ್ಲಿ
85.—ಸ್ಯೆತಾಗಿ ಸಮೆಱಿಪೇೞ್ದಿ— ಗದ್ಯ ಕ್ರಿಯಾಮಸಮೇತಂ.
86.—ಸಮುವಿತಪ್ರ—
87.—ಯೆಯು ನಱಿದೆ.
90.—ಳೊಂದೂದೋಜಸ್ವಿ—ಕೈಕೊಡೆಯೂ—ಸುಕರಕರ.
91.
92. } ಈಪದ್ಯಗಳಿಲ್ಲ — (ನಿರಂತರ ವಾಗಿದೆ)
97.—ದನಂತದಂತ ಭೇದಂ.
101. ಳಾವುವಾನುಪ ವರ್ನಿತಮಾರ್ಗ ಯುಪ್ರ—ನಿರ್ನೀತೆ—
103. ನೋಡುವೆ ನತ್ರಿಗು — ಮನದಳ್ಳಱಿ ನೋಳ್ಪೆ—ನೊಡಿ ಡುವೆ ನೆಂಬು—
106. ವನಾಸನಾ | ರತಸುಖ.
107.—ದಾಂಪರ ನೆಂಬುದಿದಾ.
108.—ದಾಕ್ಷಿಣಾತ್ಯವಾ | ಮನದೊಳಗಾಗದುಂ—
109.—ನಿಷೇದಿಗಳೊಳ್
111—ಗುಣೋದಯಕ್ಕವಿಯದೆಂ
113. — ಮಿಕ್ಕಶಬ್ದಾಲಂಕಾರಮುಕ್ಕುಂ ದುಕಂಮುಸಯಮಕಂ ಪ್ರೇಮದಿಂ ಗೋಪಿತ ತ್ರಯಂ ತ್ರೀಮದಥ್ವಬ್ರಮಂ ಚಕ್ರ... ...ವ್ಯಂಗಳ್ಕವಿಶೇಷ.ವಿೂತ್ತೊಪ್ಪಿವಿವಱಿ ಲಕ್ಷ್ಯಭೇದಮಂ
114.—ಮೊದಲೊಳ್ ಪೇೞ್ವುದು ದುಕರಂ

115.—ಕೆನ್ನಂ ನಿರಂತರಮ

116.—ಪೆನ್ನಂ—ದಕ್ಕಿಂಕೆ— ತಾಳಿಂತ
ಳಿಜನಂಕನಾನದೆ

117.—ಶ್ಲೋಕಂ ನಾದ—
—ದಮಸಾಧಿನಾ

118.—ನಾನಮಾನ ಮಸೇನಾನೀ ಸೇ
ನಾಸೇಮನನಾದಿ ನಾ || ಮಾನ
ಸೇನ ಮನಾನಾದಿ ದಿನನಾಮನ
ಮಾನದಿ

119.—ತೋಪತ್ತಾ—ಚತುರ್ಥಿಳಿಪ ಲ
ಕ್ಷಮಂ

—ನಿಂನಿಂ ನಿಂನನೆ ನಿಂನಾನಾನಾ... ||

121.—ನಂನಿನೇನಂನನಾ ನಾನೆ ನಿಂನೆ
ನೆನನನೂನನಂ||

122.—ನೀ—ನಿನಾನಿಂ ನನನನು

123.—ಕಿಡಿ ಕಿಡಿಪಂತೆ—

124.—ನೂರೂಢಗುಣ—

131.—ನೇತ್ತ್ರಕ್ಕಿಳಿವಂ—ಖತಾಭ್ಯಂ

132.—ದಾರುಣದಾರುಣ —

133.—ತಾರತಾರಕ ರಾಗಾಭಾತರಮ
ಣೀಯೆಯುಂ

134.—ಅಜೇಯಂ— ಮನುತ್ತ—ತ್ರಿಜಗ
ದೂದನಂ

135.—ಸಾಮಯಿಕ—

137.—ನೆರೆದಾನೆಲ್ಲ --ದಾನೆಲ್ಲನೀಂ

138.—ಲಾಗದೇನೆಂಬವನ—

(ಅರ್ಥಭ್ರಮಣ) ಇಲ್ಲ

140.—ನ್ಯಂಪರಿಗೊನರಾದನುಂ

142.—ವಿೂಱ ದಾನಪನೊಳ್—ಲಕ್ಷ್ಮೀ
ಮದುಂತಂ

143.—ಬಗೆದುವೊಳಿಕೆಯೊಜ

146.—ಕಾಲದಿ—ಬಱಿ ನೆಲದೊಳ್

148.—ಕ್ಷುಚಯಂ—

148.—ಅವುದಂ ಬಾಗಿದಂದು ಮಥತ
—ವುದಂ ಚಿತ್ತಾತ್ರವಯವಂ ದಿವ
ದಿನಿಂದುಗಿತ ಗಗನಂನುಡಿವವು
—ಗೊಳ್ವದಾ

151.—ವಕ್ಕಳ—

152.—ದಪಳಂ ಬನದೊಳ್

153.—ಮಾರ್ಗೋಪಚಿತ—ಮಾರ್ಗಾ
ಳಂಕಾರಂ ಕ್ರಿಯವಾ — ಗುಣ
ದೊಳೆ—

154.—ಗುಣವಿಮಲಾಂಬು ಗಣನಾ
—ಥಾನಲಂಕ್ರಿಯಂ —ಮಾಳ—

155.—ಯ್ದುವಱ

ಪರಿಚ್ಛೇದಂ III

1.—ವಿಬುಧಾಸ್ಪದ—

2.—ಧುರತಿಶಯ—

4.—ವ್ಯಾಸ್ತುತಿ — ವ ನಾಂವೊದ
ತ್ತಾಪ—

7.—ಹತಿತಶಾಬಜಾತಿಂತ ಕಳಾಪಂ
ನವಿಲಾ ಂ—

9. —ರೋಮಾಂಚಕಂ ಭುವಂ—
—ಮದವಾಸೆ—

10.—ನುಳಿ ||

14.—ರೂಪಗಂ ಕ್ರಮ

20.—ಶಾಂತಿಯನಾಜಲ—

22.—ಜಲತ್ವಿಚಂ—

—ಕ್ರಮವ ಭಿನ್ನ—

24.—ಲ್ಲಿದುಕಸನ—

25.—ಮಂಬಬುಜದಲರಾ— ದೊಪ್ಪ
ವ—ಬತುಂ ಗೆಹೊಸಗೆ—

28.—ಲೆವೇಡಿ ಱತೊಂಡ—

29.—ಷವಿರುತ್ಮಕಂ—

30.—ಕಳೆಯಲಕ್ಕು—

33.—ದೋಷಾಕ ಮಪ್ಪೊಡಿಂ

36.—ಕರನಾಗಿ ವಸಂತ—ನೆಂಬ ವಿಪ
ರೀತಂ

38.—ಬಗೆ ಧರ್—
39.—ತಿಯಂ ಶಬ್ದಾರದಿಂ—ಗುಣೋ ದಯೆಕೃತ ವಿಸ್ತರಂ—
41.—ಲಾಕರ ಕರಿರ್—
43.—ಸಿತಮ ಕಿಣಭೋ—
45.—ಕದಂಬಂ ಚಿತರಾಜ—
46.—ಮಂಬ ಚಿತರಾಜ—
47-48.—ಮುಪಸ್ತಕಳಂ ಕಮಲನನಿಲ —ಮನನಾತಳ ಸಾಪ್ಯ ಮನನಿ ನಿಯತ—ರ್ದಮನ ಶಯನಂ—
49. ವ್ಯತಿರೇಕ ತಗತ—
50—ಲಿಲಳನಂ ನೀಂ ಪೋಲ್ತೆ
51—ತಿಳಿಗೆಳನನೆ—
52. ಯಾಥಾ—ಲಕ್ಷವಿವಕ್ಕುಂ ಬಗೆಗಾದೀಪಕದ—
53.—ಷಿಯಪ್ಪ ಪಳಿಗಿಂದೀ—ಳಿವ—
54.—ಮಳಾಂಕು ನಂತೆ—
55.—ಕ್ಕುಮಮಳ— ವಿೂಮೃತ—
56.—ತರಮಾಯ್ತು.
57.—ಬಳ ಮಾಡಿದ—
59.—ತೆಱದೆ ಡೊದುಪಮಾ—
60.—ವಸ್ತೂಪಮಾ ಂಬುದು
62.—ತಳದವೂ ನಿಂನಯನೀವಲ್ಲವಮೆ ಲೆನೆ
63-64.—ನಾಮಾಂಕಿತ ರಸಿಜ
65.—ಪೆಱದು ಳ್ಸದೃಶಂ.
66-67.— ದಲ್ಲದೆಲ್ಲೆಂಬ— ಯೋಪ ಯಿಂಕೆ—
67.—ನೆಂಬುತಕ್ಕಾಗಿ—ಕನದ ವಿಂ ಡುಗಂ—
68.—ಲೋಚನ ಸಮವಾಯ.
69.—ವೋಹದಿಂದೆ ವೋಹೋಪವಿ ತಂ

71.—ಜಿತತ್ರಿ ನಿಂನಮುಖಂ—
72.—ಪಮಾ ಷಂ.
74.—ದೇಕ ಯತೀಕಂ||—ಮುಖಂ—
75.—ಸ್ವರ ಗಳ್ನಿರುತ—
77-78.—ಗಳ್ದೊರೆ ವುತನಗೆ—ಮು ಖಂ ನಿತಾಂತಮೆಂಬಾ—
79.—ಪ್ಪದುದುರು—ತಸಂ ವೋಪ—
80. ಮಳಯರ್ದ—
81.—ಮಾಹಾ ನಿಜೋದಾ ಶ್ರಸಂ.
83.— ತಾಂಬುಜಸುಮಮಂ— ಲ್ಕು ವೆಂದೊಡರಿಗೆ ವಾ—
84.—ಶುದ್ಧಭೂಮಿಯೊಳ್—
85.—ಥರಾನಿಂನ—ಯಶನಿಲತಾರಾ—
86.—ಕೊಳ್ಗೆ ಪಮೆಯಂ.
87.—ಮಾನದರನಱಿದು—
88.—ಬುದು ವಿಂನದು—ಪ್ರಸಂನಾ
89.—ಪ್ರಸಂ ಷಂ
91.—ಣಮನಱಿದು ಶರ್
92.—ತಗುಳುವು—
93. ಗೈರಿ ದ್ರುಮಂ—
96.—ವಿವಕ್ಷಿತ—ಯೋಗ್ಯತಾಲಂಕೃ ತತಿಲಕ್ಷ—
97.—ನೆಯವರೊಳ್.
98.—ಪರವೂ—ಸಂಗಮುಮಾ.
99.—ತಱಿಸಲಱಿವಂ.
100.—ಸಾಸ್ಪದವೊದಲಾ—
102.— ತಗುಳ್ದುವೇಗದೆ ತಪದೊಳ್— ದತಿಶಯಾ—
103.—ಕಾಂತಾಕರ—
105.—ನೆಗಳ್ಚ—
106.—ನಿನುಂತೆ—ನಾದರ.
107.—ದೆಪೆಕ್ಷಪ—
111.—ಪಹಲೆ—ನಿಸೇವ್ಯ.
112.—ದೇಹಂಗಳೊಳೇ

113.—ಕಳಾಕಂ—
119.—ಗಾಯಿಪನೆ—
120.—ಪೇಲ್ದಿದೆಱಕ—
121.—ಸೈತೆಣಿಸಿ—
126.—ಸೈತಡಿವಡಿಕೆಗಳಂ ತೊಡೆದ—
128.—ವೃದಳಿ ದೊಳ್ ||
129.—ದತಿವಿರುದ್ಧ—
1.30—ನಪಾಯ ದೊಳೆ—
132.—ನಱಿಯಿಪವೆವೆಲ್ಲಗೆ—
134.—ಯಮಭಿಮತಮ—ರ್ಬಳಿಗುಡೆ
138.—ವಿರಹಿಗಳೊಳ್
139.—ವಿಸ್ತಾರಿ (ಓಲೆಒಡೆಡಿದೆ)ಂ ಮ ತ್ತಂಪ್ರ
140.—ವನಾಂ ( ) ವುತ್ಯಣ—
141.—ತ್ರಿಯ ( ) ತಮಱಿ—
146.—ತಿಯ ( )ಯಾಸಂ—
147.—ತೋರ್ಕೆ ( )ಯಱಿಯ.
148-49 —ಳಮಂ ( ) ಪಗೆಯಂ
150.—ರ್ಕಳ್ಮಂ—ಲೀಯ ತಂಬುಧಿ.
151.—ಪಿರೆದ—
155.—ಮಾಡೀಗಣಿದ — ಕೆೊಳೆ—
170.—ದದಱರಸಮ
172.—ಮುಟ್ಟಲದಂತು—
173.—ದೊಂದುಂ ಗುಣಂ
175.—ಚಲಮುಂನೆ ಪ್ರಿಯ—.
177.—ಮೇನುಣ್ಬಿಸನಂ—
178.—ಮೇರಮೇ—
184 —ಶಿಶಿರಾಂಶುವೆಂದು ವಿೂಶತಿಗ್ಗೆಂದುಂ— ಣನುಮಲ್ಲದಮರೀಚಿ—ನಲ್ತೆ —

186.—ದದಱ ತತಿ—
187.—ಸರಕೋಟಿ—
188.—ಗಳಂ ನಮನಕೆ—
ರೂಪವಚನ—ಸತ್ಯವಿದಾ—
189.—ಬೀಭತ್ಸ—
190.—ಯ್ವಿನೊ...ಪ್ಪಂನೆಗ
191.—ದಿಱಿದನಿಂದಂ — ಲಿವಂಬ—
...ದ್ಭುತ—
192.—ರಹಾನಳನಾಳಾಪದೆ—
193.— ತಳಮಳಿಸುಗುಂ—ತ ಗಾರ—
195.—ಟ್ವಾಜ ಸುತೆಯ—
198....ಣದೊಳ್—
199.—ತದಿ ವಿಚಾರ—
200.—ಲ್ಲದೊಡೆಳಾರ್ದು—
201.—ಮ...ಳ್ವಾಗಳಕ್ಕು—
202.—ತಾಪಮು...ಬಗೆದಿರ್ಪ
203.—ಡಗೂ ದಂ—
204.—ರುಚಿತ—
205. ಗ ದಪರಕೆ—
—ಕೊಂಡ ವದಿಂದು—
206.—ಗೆಯೆ ದುಂಪರ—
208.—ಕೇವಳಮುದ...ಭಾವಕ—
209.—ಕಮಳದೊ...ಯುಗ
210.—ರವಿಶೋ — ತ್ಮೋ ... ಲಬ ಲೀ—
211.—ವಿಶೇ...೦ || ಪುರ—
211.—ಲೀಲಾ...ದಾದಿನೀಕಂ || ರಮ ಣರಣಿಗೋಷ್ಠಿ—
213.—ದ್ಭವ...ತಾಸಹ—ಸೇವಾರಾತಿ

21.4—ಮಂ...ಪ್ರಯಾಣ
215.—ಸುಲ...ನಾವೃತ್ತ
216.—ಜಲ್ಪಂ...ಯಸಾರಾ—ಪರ ...
ನುಷ್ಠಾನ—
217.—ರಾತ್ರ್ಯರ್ಧ—ಶಬ್ದ ... ಣರತ್ನೈ
ಕಾಕರಾಸಾ ... ಧರಣೀಚಜ ರಾ
ಕ್ರಾಂತ—
218.—ಕಾವ್ಯ...ದೆಸಿಲ್ಕು
219.—ವೇಕ...ಕ್ತಿಕಳಾ—
220.—ಪ್ರವಿ—ಪ್ರ...ತನುಐಾ
221.—ಗುರುಗು...ಸೇವನಾ

222.— ರಣಿಕ — ಗಣಾಸ್ತ್ರಹ ...
ಯಾಂತರಸರೂ ಪನಪಾರ—
223.—ಶ್ರಿಯ—...ಣುವಿಶ—
224.—ಸಿಂತಭಿ...ಡಿತಮ
ಹಾ—ಪೆಜಿರೊಮೆಚ್ಛ
—ವನುಮೇನುಮಂ ||
235. —ಳ್ದ ... ಣೊಂದಸ್ಯೈಕಾಂತವಿಷ
ಯಾಕಯ — ವರ್ ನೃಪತುಂ
ಗ...

ಮುಂದೆ ಗ್ರಂಥವಿಲ್ಲ



# B

ಮೈಸೂರ್ ಓರಿಯೆಂಟಲ್ ಲೈಬ್ರರಿ ಪುಸ್ತಕ.

No. 110.

(ಅಕಾರವಿಸೆ)

I.

ಶ್ರೀಮದ್ವೇದವ್ಯಾಸಾಯ ನಮಃ.

1.—ನಾವನನಗಲಳ್.
3.—ವಿಭಾವದಿ.
4.—ರೋಚಿತರಚನೆ.
5.—ನಪ್ಪವನತಿ.
6.—ನೇಕವಿವೇಕ.
7.—ನೃಗಪತಿ
—ಸುಪ್ರತಿಹತವಚನ

8.—ಜನಂಗಳ್.
10.—ಯಲ್ತದಂ ಕಲ್ತೊಡನೋದು ವ ಬಲ್ಮೆ—

11.—ಶ್ರುತಪರಿಚಯ — ತಕ್ಕುಂ— ತಿಯಿಂ—

13.—ದಯತಾಳ್ದೀ—
14.—ಚನಂ ನಗದಗೃಹಾ—
15.—ಬಗೆಯಂ ಬರದಿರೆ.
18.—ಕವೀಶಪ್ರಧಾನ—
20.—ಬುಧಜನವಾವಿವಿಕ್ತ.
24.—ವಿವಿಧಮೆನಿಕ್ಕುಂ—
26.— ಸಂಸ್ಕೃತಕಾವ್ಯದ— ಹರುಷ ಚರಿ—

28.—ಸಾಂ ಮೈಕಾದಿ—
29.—ನೆಗಟ್ತಿಗದ್ಯಾ—
30.—ವಿದ್ಯಾಪಾದಪರ—ಯುಕ್ತಂ.
32.—ತ್ರಾಣಮುಂಬೆ ಡೆಯು—
33.—ಪಾಲಾದಿಗಳೇ

34.—ಬೆದಂಡಗಬ್ಬ
35.—ಮತ್ತಂದಲಿತಿಕೆ.
36.—ವಿಷದವಿಷಯ—
39.—ಕಮುಂಮಾಮಾತುಗಳಂ.
43.—ನೆರ್ದೆವೆತ್ತ—
44.—ಪೇಳ್ವುದಾಗದುಮುದಾರ—
46—ಬೇಸರುವಂ—
50—ರಸಿಕತೆಯೊಳ್—
52—ಅಹರಹರುಜ್ಜೈಃ" ಎಂಬ ಈ ಕಂ ದವು ಇದರಲ್ಲಿಲ್ಲ.

53.—ನಾನಾಭರದಿ—
63.— ಲ್ತೂರುಂ ದೂರಮುಡೆ—ಣ್ಣಂ ದಂದ.

72.—ರೀತಮುನದು ॥ ಮಾಡುಗು—
75.—ದೇಸಿಯನೆ—
77.—ಚತುಃಪದಪದವಿ—
86.—ಮನನುಮುದಂತುಪೇಟ್ತಿ.
93.—ನ್ಯೂನಾ ಮದಟ್ಟಿಂ—
106.—ಉಕ್ತಿವಿಚಾರನ್ಯಾಯನಿಯುಕ್ತಂ
108.—ವಿವೇ ಕಿಗರುಹಿತ—
112.—ಸಿರ್ಕುಮಾಣಂ—
117.—ಕಾರಣವಿಭಕ್ತಿ—
118.—ನಾಡೆ.
122.—ಮಂತರೆ—ಳಾದುದಂ—
128.— ಬಗೆದವನಾವನೋಡಲಟ್ಟಿದೆ — ದಾನುಡಿವಸೀರ್ದವೆನ್ನನರ್ಪಿ.

129.—ಸರೆಯುಲಾಬಲಮೆಲ್ಲ—
130. ತಿರವೆಲೊಡ್ಡಳಿ—

132.—ಜ್ಞ ಯೋದ್ವಾ ಪಿತ—
135.—ನೆರನೆ ಪೂಣ್ಬು—
143-144. ದುಪಚಿತಕ್ರಮುದಾ ತುಗಳ್
ಜಳದ?—

144.—ದಭ್ಯುಪಗವೋ......ರಳಳ.
144.

ಜಳದಸಂಹಿತೆಯಂತಿರೆಹಸ್ತಿಗಳ್।
ಗಳಿತಧಾರೆಗಳಂತಿರೆ ಪತಿಗಳ್ ॥
ಬಳಿಸಿಕಾರ್ಗೆಣೆಯಾಯ್ತು ಮಹಾ
ಹವಂ.

(ಮೂರುಪಾದಮಾತ್ರ)

148. ಳೋರ್ವಿಶೋದಿತಾ—

ಅಂತು ಪ್ರಥಮಪರಿಚ್ಛೇದ ೧-ಕ್ಕೆ ಕಂದ, ವೃತ್ತ, ಗೀತಿಕೆ, ದ್ರುತವಿಳಂಬಿತ ಸಹಿತಾ ೧೫೦-ಕ್ಕೆ ಮಂಗಳ ಮಹಾ (ಎಂದಿದೆ).

II ನೆಯ ಪರಿಚ್ಛೇದ.

ಶ್ರೀಮದ್ವೇದ ವ್ಯಾಸಾಯನಮಃ.

14.—ಚಪಳಧ್ವಜ—
18.—ವುದುನುನೊಂದು ಬಾರದ.
20.—ಯೊಳಲಘು ಚ್ಚರನೆಯೆ—

(ಪದ್ಯಸಂಖ್ಯೆತಪ್ಪಿದೆ.)

33.—ಕುಡಲಿರ್ದಂ—
36.—ಪುತ್ರಿಕೆಯಲ್ಲಿ ಬಿಳ್ದ—
40.—ಕೇತನಾಭತರಲೋಚನೆಯುಂ—
42.— ಜನಿತಮುಂ ಮಾಡಲತಿಲತನ
ಯನ—

44.—ನೊಲವಿಂಪೆತ್ತಂ—
46.—ತಜ಼ಿಸಲಲಾಗವಾ —
48.—ಪೊರದಿರೆಯೊಂದೊಂದ—
52.—ಬಗೆವಾಗಳೆರಡೆ.
62.—ಮುಖಿತವಿಧಾನಂ—

63.—ಶ್ಯಾರದ—
65.—ಪುಷ್ಪಾಕರಂ.
67.—ದಿನಕರಖರ.
72.—ಪರ್ಯಾಯ ವಿವಿಧಾಕ್ಷರ—
73.—ಒಂದರ ಹತ್ತುಗಳಂ—ಳಿಟ್ಟು
ಕೂಡಿ.
74.—ವಿಂದುವಲನಲಕ್ಷ್ಮೀದಿನ— ವಿನ
ಹರ—

79.—ನೆಗಲ್ತಿಗದು ಮದರ—
78.—ಲೀಲಾಂಬುಜ
85—ಗದ್ಯಕ್ರಿಯಾಮ
98.—ಪ್ರಗುಣ ಗುಣೋದಯರ್ಕಳ್
101.—ವೃತ್ತಿವಿ ತಮುಂತದೀಯ
102.—ಮನದಳ್ಕರಿ ನೋಲ್ಪಿನಲ್ತಿ
104.—ಸುಖಸಂಗತ
105.—ಮೆಂದುಪವನಾಂತರ
107.—ಮಾರ್ಗಗತಿಯುಂ
111.—ಕೈಲಿಯುದ
110-112 ಮಿಕ್ಕ ಶಬ್ದಾಲಂಕಾರ ಮ
ಕ್ಕುಂರದುತಂ ಮುನಿಯಮತಂ
ಪ್ರೇಮದಿಂ ಗೋಪಿತ ತದ್ವಶ್ರ
ಮಂ ನಕ್ರನಾಮಮುಂ ಮುರಜಬಂ
ಧಕಂ ೧೧೧॥

113.—ಮಿವರೆಲಕ್ಷ್ಯ
114.—ಸಮಸ್ತಾರ್ಥ — ವೊದಲೊ
ಳ್ಪೇಳ್ವೊಡದು
115—ತಾನೆತಾನೇ—ಕೆನ್ನಂ (ಕೆನ್ನಂ)
116.— ವದಕ್ಕೆಂ ಕೆಳಾಡಾನಮಾನಳಿ
—ನಂಕನಾನದೆ ಸನೆದೇನನಾ
117. — ಮನಾದೀನಾನಾದಾನದಭೇ
ದನಾ ॥

118. — ನಾನಮಾನಸನಾಗಿಸೆನಾ ಸೆ
ಮನಾ—

ಮಾನಸೇನಮನಾನಾದಿ ದಿನಾನಾ

119.—ಗೂಢಕಸಮುದ್ಧಿ೯ಳಿಪ—
120.—ಘನಸ್ತನಂ—
121.—ನೀನೇನಂತಂನ—
122.—ನೀನೆ ನಾನಿನ್ನನುಮಾನ—
123.—ಕೀಡಿಪಂಬಾರ—ಕೀಡಿಪಂ —
ಕೀಡಿಪಂ—ಕೆಡಿಸಲ್ಸುಡಿ—ಮೇ

124.—(ಲತಾಭ್ಯಂ)
125.—ದಿದ್ಧ೯ನಾಗನೇ ||
126.—ದೀನಾ — ನಾನಿನ್ನನಾನೆನಾ||
ದೀನಾ—ನೀನೆನಿನ್ನ

130.—ಮಿಕ್ಕಳಿಪಂ—ನೇತ್ರುಕ್ಕಳಿವಂ
132.—ದಾಭನಂ—
133.—ನಾದಾಮಾ — ನಿತಂಬಃ||—
ಕರಾಗಾಭತಾರ ತಾರಮ...

134.—ಲ್ಕಮನುತ್ತಾಗಜಂ — ತ್ರಿಜ
ಗದೂದನಂ

135.—ಲೋಕನಾ ಕಾಸರಕೋರಕಾ||
137.—ನಾನೆಲ್ಲಿನೀಂ || ೧೩೪|| (1)
ನಾಣದಂತಿ ರಿಸಂಗಡಿಯೊಳ್ಸರ್ವ
ಯಮಕಂ|| ೧೩೫ ||

138.—ಗಜನೆ ನೆರಪ್ಪಲಾಗ ದೇನೆಂಬಂ
ಥನ ದೊಪ್ಪಮ ವನೇಚರಮದಾ
(ಅರ್ಧಭ್ರಮಣಂ)

139.—ನರದಾನಪರಾನೋ ನೆರದಾಕೆನ
ರಾಕಮ

—ತಿಂದವಧಾರಿಕ್ಕುಂ.
140.—ಪರಾದಾನೇ— ಪರಿಜನರರಾಧ
ಮಂ ||

(ಮುರಜಬಂಧಂ)

141.—ಧಿವ್ಯಸೇವಾದರದಿಗಡೆ ನೀನರಸಿ

142.—ಮದಂ ದಂತಂ — ನೀಂ ಣಾ
ದಾರ್ಯಾ—ಳಿಂ—
143—ರ್ವಕವಿಗಳನೆನೆ ವಿನಿಂಪೇಟಿಶ್ಚಿಂ
ದುಷ್ಕ — ಬಗೆದು ವೊಳಿಕೆ
ಯೊ—

144.—ಭಾವಿಸ—
146.—ಕಳೆವಾಡು ತದ—
147.—ನೆತನೆ ತಾಂ—
148.—ತ್ವಕ್ಸ್ಪಜಯೆಂ
150.—ಅವುದಂ — ದಂದು — ದಂ
ಚಿತಾ — ಧಿವದೆನಾದುಗಿತಂಗ
ಗನಂ — ವವು — ಕೊರ್ನ೯ಡಿ
ಯಂ

152. —ಲಾಟಸುಗುಮದ ವೆಳಂಬ
153. ವಳಾಂಬುಗಣನಾತೀ
154. ತಾಂ—ವಿಧಾನನಲಂ
ಕ್ರಿಯಾ — ಗಭೇತಂ ||೧೫೦||

(ಇಲ್ಲಿ ಅಂತ್ಯಗದ್ಯವಿದೆ)

ಶ್ರೀ ಶ್ರೀ ಮಂಗಳಂಶುಭಂ ಶ್ರೀಹರಯೇನಮಃ
ಶೋಭನಮಸ್ತು ನಾರಾಯಣಾಯನಮಃ

ಪರಿಚ್ಛೇದಂ

III

ಶ್ರೀಮಧ್ವೇಶಾಯನಮಃ

1.—ಶ್ರೀವಿಧಿ ವಿಬುಧಾಸ್ಪದ—
4.—ಹೇತುಭಾವನಾಂ ವೋದತ್ತಾ—
ರಾಡಿಗ—

—ನವಿಲಾಟಂ
7.—ಲಾಯತಂಗಳಂ—
8.—ನಲಿವನಲ್ಲಕೀ—
9.—ಕಂಚಕಂ—

(1) ಒಂದು ಪದ್ಯವನ್ನು ೨ ಪದ್ಯವಾಗಿ ವಿಂಗಡಿಸಿದೆ.

10.—ಬೆಂಬೆಯು || ೧೦ ||
16.—ದೊಸಗೆಯುಂ—
19.—ಸಮುಸುಂಬು—
22.—ರಾಕ್ರಮ ರೂಪಕಮುಕ್ಕುಂ
24.—ಪ್ಲಿಮುಕಸನ—
25.—ಳೆಂಬತುಂ ಗೆದೊಸಗೆ—
26.—ತದ್ವಾವ್ಯ || ೨೬ ||
23.—ದರ್ಥಾಂತರವಿನ್ಯಾಸಾಖ್ಯಂ ಪೇ
ಳ್ವುದರ್ಥಾಂತರ—

33 —ಭೂತತತಿ ಸೊಗಯಿಸಿ—
ಕರ ಮಪ್ಪೊಡಿಂತು—
35.—ಲಿನನಾಗಿ ವೆರ್ಚಿ
36.—ನೆಂಬು ವಿಪರೀತಂ
37.—ತತ್ಸರೂಪ—

38.—ಬಗೆ ಮುಂತಣ.
39.—ಕೃತ ವಿಸ್ತರಂ.
41.—ವೃತ್ತಂಕ್ರಮನರಸಾ—
42.—ತ್ಕರನಿರ್ನಿಜ — ಕನುಂ ನೀ
ನುಂ—

43.—ಸಿತಮ ಕಠಿನ—
45.—ಕದಂಬಂ ತಸರಸಕೇಸ—
46.—ನುಂಬ ಚಿತರಾಜ—
47.—ಲೋಚನಲೀಲಮುಪಾಸಕ್ತಲಂ
ಕ—ತೊರೆಗರಿವಂ|| ೪೭||

49.—ವ್ಯತಿರೇಕ ತಗತಕ್ರಮ—
50.—ಲೀಲ ಳನಂ ನೀಂ—
25.—ಸಂಖ್ಯಾನುಗಮ—
53.—ಯುಪ್ಪ ಳನಿಂದೀ—ನುಱಿವ—
54.—ವಿಟಪಿಗಳಾ ||
55.—ತರಪೂಯುತ್ತು—
57.—ರಿಪುಬಲ ಮಾಡಿಡ—
59.—ತೆರದೆ ಡೂದುಪಮಾನಿ—
60.—ಸ್ತೂಪಮಾ ಬುದುಪೆಸರಿಂ—

62.—ತಳವೊ ನಿನ್ನಯುನೀಪಲ್ಲಮೆಲೆನೆ.
65.—ಪೆರಡು ಳ್ಸದೃಶಂ—
66.— ಳಿಕುಳೋಚ್ಛವಜನಕಂ—ದತಿ
ಶಯೋಪ ೧೬೫||

67. ನೆಂಬುತಕ್ಕಾಗಿ—ಕನದವಿಂದು
ಗಂ—

68.—ಲೋಚನ ಸಮವಾಯ
69.—ವೋಹದಿಂ ವೋಪೋಪ—
71.—ಶ್ರೀ ನಿಂನಮುಖಂ—
72.—ಶ್ಲೇಷೋಪಮಾನ
73 —ಸರಸಿಜಂ ಸರಸಿಜಂ—
74.—ದೇಕ ಯತ್ರೀಕಂ—
75.—ರಸ್ವರ ಗಳ್ನಿರತ—
77.—ದೊರೆ ವುತನಗೆ—
78.—ವೊಲಾ ತಿಂತತಿ—
81.—ಮಾಣಾ ನಿಜೋದಾರ —
ಶ್ರೀಸಂ

83.—ಪೋಲ್ಕುಮೆಂ ವಾಕ್ಯೋಪ
84.—ತತಿಯೊಲಪ—
85.—ಧರಾ ನಿಂನಂ ಯಶನಿಲತಾರಾ
86.—ಕೊಳ್ಗೆ ಪಮೆಯಂ
87.—ಮಾನದರನರಿದು—
88.—ಜಲ ಸನ್ನುತ—ಪ್ರಸಂನಾ—
89.—ಪ್ರಸನ್ನ ಷಂ ||
90.—ನೆರಪಂ—
91.—ಗಣಮುಪಜುರಿದು ತಿರ್
93.—ಗೈರಿ ದ್ರುಮಂ
96.—ಸದೃಶಯೋಗ್ಯತಾಲಂ—
98.—ನೇಲುಂ ಪರಪುಂ—
102.—ದತಿಶಯಾಕ್ಷೇಪ
103.—ಕಾಂತಾಕರ
105.—ನೆಗೞ್ದದ—ಪ ಮದುಕರಿಯೆ
ನೆನೆನ—

107.—ಬಾಪೇಕ್ಷ್ಯಪಮೆಂಬ—

112.—ಗೇಹಂಗಳೊಳೇ
116.—ಪೆಡಿಸಲ್ತಾಂ—
126.—ಸಯ್ತಡೆವಡಿಕೆ
128.—ವುದಳಿ ದೊಳ್ ||
130.—ನಸಾಯ ದೊಳೆ
137.—ವಿರಹಿಗಳೊಳ್
150.—ಗಳ್ಮುಂ—ಯ ತಂಬುಧಿ—
151.—ಪರೆದವುಡಿ—
152.—ಜ್ಞೆಯ ಯದೆ
153.—ಚಕಂಮೆ ದಂತೆ—
164.—ಕಾರಂಜುಸಾಪಕಸದಳಂ—
170.—ವಂಮುವಳಾ ನೆನಿಲ್ಲದದರರಸ
173.—ದೊಂದುಂ ಗುಣಂ ||
175—ಮುಂನೆ ಪ್ರಿಯಡೆಡೆಗೆ —
177.—ಪರವಿಭಾರಮು—ಮೇನುಣ್ಬ ಪ
178.—ನೇಗಳೆ—ತಾರಮೇ—

184.—ನಿೊಶನಿಗೆಂದುಂ — ನುನುಲ್ಲದ ಮರೀಚಿ

186.—ದಱಿಂ ತತಿಯಲ್ತೆಂ—
187. — ನಿರುತರ್ಮುರ್ದಿಸುವನೆನೆ — ಣ ಪೋಹಂ

188.—ನಿರೂ ವವಚನವಿ—
189.—ಶಾಂತ ರಂನವ—
192.—ನಿಂನಾ ನಳನಾಳಾಪ—
193.—ನಿಭೃತಂ ಗಾರರಸಂ ||—
195.—ನಂತಕ ದೊತಂದಿಟ್ಟ—
196.—ದ್ರುವಮುಸು—ಕ್ರ ವಹಂ—
198.—ಱದೊಳ್ಪರಿ—
199.—ತದಿ ನ್ಯವಿಜಾರ—
200.—ದೆಳ್ವಾರ್ದುರ್

201.ಮುಗುಳ್ದುಂಮು ಮಾತಂ—
202.—ಮಳಿಪು ವಲ್ಲಭ—ಬಗೆದಿರ್ಪ
203.—ಪೊಡಗುಂ ದಂತಗುಳ

205. ಗು ದಪರಕೆಯುಂ—
—ಭಾವ ರಮುಂದೊರೆ
206.—ಸಗೆಯುಂ ದುಂಪರ—
206.—ಪೆಚಜ್ಞ ದಕ್ಕೆ—ಥರ ರಾಥರ—
208.—ದರೊಳಂಕೃತಿ—
210.—ವಿಶೋತ್ಪಾದಿ
211.—ವಿಶಯ—
212.—ರಣಿ ಗೋಷ್ಠೀ—
213.—ಸೇವಾರಾತಿ—
214.—ವಿರ್ಯಾಥಾರ್ಯ ಕಾರ್ಯಾಶ್ರಯ
215.—ಳಾಪಸೀಲಂ—
217.—ರಾತಿರಾರ್ಥಾರ್ಥ — ಸಂಚಂ ಕಾಕರಾಸಾಗ — ದರಣಿಚ ರಾ ಕಾಂ—

218.—ಶಯಪ್ರವಿಭಾ—
221.—ಮಳಕೋಶಳಂ—
222.— ಪರಮಾಕಾರ — ಣಾಸ್ತಹನ ಸರೂಪನಪಾರಪರಾಯಣಂ

224.—ಪರರೊಮೆಚ್ಚಿ
225.—ಕಾಂತವಿಶಯಾಶಯರಾಗಿ — ನುಡಿಗಳೊಳ್ ಬಗೆದು ಪೇಳ್ವು ದುಬಾರ ಕವೀಶ್ವರಂ || ೨೨೨||
227.—ವೃತ್ತಿ ವಿಲಸದ್ಗುಣಾ—ನಾವ ಚೋದ—

228.—ವಿದಿತ ವಿಭವ—
229. —ನೇಕರೂಂಸರಸಾ — ಪರೊ ಸಿರತಂ—
232.—ರಚನೆ ಘುಟಿತಮುಪ್ಪಾತ್ರಿಪ್ರಾ ಸಂ ಬೇರೆ—
234.—ಪೆರಗಿಂದೀಕ್ಷಿಸುವವಳ—
236.—ವಿಹಾರಾಪ್ರಭಯಾ—
237.—ತನು ರಾಬ್ಧಿ — ತಸಿಶೈಲ— ಯಣಸ್ತ್ರೀ — ಶಾರಾಂಬರಂ || ೧೩೪||

# ಪರಿಶಿಷ್ಟಂ ೩

(ಈ ಕವಿಯು ಅನುವಾದನಾಡಿರುವ ಗ್ರಂಥಗಳ ಆಕರವನ್ನು ಸೂಚಿಸುವ ಪಟ್ಟಿಕೆ)

## (1) ಭಾಮಹನ ಕಾವ್ಯಾಲಂಕಾರದ ಅನುವಾದಗಳು.

| ಕವಿರಾಜಮಾರ್ಗದ. | | ಭಾಮಹನ ಕಾವ್ಯಾಲಂಕಾರದಲ್ಲಿ. |
|---|---|---|
| ಪರಿಚ್ಛೇದ. | ಪದ್ಯ | |
| 1 | 10 | ಗುರೂಪದೇಶಾದಧ್ಯೇತುಂ ಶಾಸ್ತ್ರಂ ಜಡಧಿಯೋಽಪ್ಯಲಂ ‖<br>ಕಾವ್ಯಂ ತು ಜಾಯತೇ ಜಾತು ಕಸ್ಯ ಚಿತ್ಪ್ರತಿಭಾವತಃ ‖ ೧-೫ |
| ,, | 12 | ಅಕವಿತ್ವಮಧರ್ಮಾಯ ವ್ಯಾಧಯೇ ದಂಡನಾಯ ವಾ, ೧-೧೨<br>(ಇದರ ಛಾಯೆಯಿದೆ) |
| ,, | 14 | ಪರಪ್ರತ್ಯಯತೋ ಯತ್ತು ಕ್ರಿಯತೇ ತೇನ ಕಾ ರತಿಃ ೬-೪ |
| ,, | 20 | ಧರ್ಮಾರ್ಥಕಾಮಮೋಕ್ಷೇಷು ವೈಚಕ್ಷಣ್ಯಂ ಕಲಾಸು ಚ ‖<br>ಪ್ರೀತಿಂ ಕರೋತಿ ಕೀರ್ತಿಂ ಚ ಸಾಧುಕಾವ್ಯನಿಷೇವಣಂ ೧-೨ |
| ,, | 21 | ಅತೋಽಭಿವಾಂಛತಾ ಕೀರ್ತಿಂ ಸ್ಥೇಯಸೀಮಾ ಭುವಃ ಸ್ಥಿತೇಃ ‖<br>ಯತ್ನೋ ವಿದಿತವೇದ್ಯೇನ ವಿಧೇಯಃ ಕಾವ್ಯಲಕ್ಷಣಃ ‖ ೧-೮ |
| ,, | 22 | ಶಬ್ದಾರ್ಥೌ ಸಹಿತೌ ಕಾವ್ಯಂ......................... ೧-೧೬ |
| ,, | 24 | ......................ಗದ್ಯಂ ಪದ್ಯಂ ಚ ತದ್ದ್ವಿಧಾ ‖ ೧-೧೬ |
| ,, | 43 | ತದಲ್ಪಮಪಿ ನೋಪೇಕ್ಷ್ಯಂ ಕಾವ್ಯೇ ದುಷ್ಟಂ ಕಥಂಚನ ‖<br>(ಸ್ಯಾದ್ವಪುಃ ಸುಂದರಮಪಿ ಶ್ವಿತ್ರೇಣೈಕೇನ ದುರ್ಭಗಂ ‖ ೧-೫ |
| ,, | 62 | ಶ್ರುತಿದುಷ್ಟಾರ್ಥದುಷ್ಟೇ ಚ ಕಲ್ಪನಾದುಷ್ಟಮಿತ್ಯಪಿ ‖<br>ಶ್ರುತಿಕಷ್ಟಂ ತಥೈವಾಹುರ್ವಾಚಾಂ ದೋಷಂ ಚತುರ್ವಿಧಂ ‖<br>೧-೪೭ |

1 2 3 4 5
,, 69 * ಅಪಾರ್ಥಂ ವ್ಯರ್ಥಮೇಕಾರ್ಥಂ ಸಸಂಶಯಮಪಕ್ರಮಂ ||
6 7 8 9
ಶಬ್ದಹೀನಂ ಯತಿಭ್ರಷ್ಟಂ ಭಿನ್ನವೃತ್ತಂ ವಿಸಂಧಿ ಚ ||
10
,, 70 ದೇಶಕಾಲಕಲಾಲೋಕ ನ್ಯಾಯಾಗಮವಿರೋಧಿ ಚ ||
(ಪ್ರತಿಜ್ಞಾಹೇತುದೃಷ್ಟಾನ್ತಹೀನಂ ದುಷ್ಟಂ ಚ ನೇಷ್ಯತೇ) ೪-೨

,, 71 ಯತಿಶ್ಛಂಪೋನಿರೂಢಾನಾಂ ಶಬ್ದಾನಾಂ ಯಾ ವಿಚಾರಣಾ||
ತದಪೇತಂ ಯತಿಭ್ರಷ್ಟಮಿತಿ ನಿರ್ದಿಶ್ಯತೇ ಯಥಾ || ೪-೨೪

,, 78 ಸಮುದಾಯಾರ್ಥಶೂನ್ಯಂ ಯತ್ತದಪಾರ್ಥಕಮಿಷ್ಯತೇ ||
(ದಾಡಿಮಾನಿ ದಶಾಪೂಪಾಃ ಷಡಿತ್ಯಾದಿ ಯಥೋದಿತಂ||೪-೮

,, 81 ವಿರುದ್ಧಾರ್ಥಂ ಮತಂ ವ್ಯರ್ಥಂ ವಿರುದ್ಧಂ ತೂಪದಿಶ್ಯತೇ ||
ಪೂರ್ವಾಪರಾರ್ಥವ್ಯಾಘಾತಾತ್ ವಿಪರ್ಯಯಕರಂ ಯಥಾ || ೪-೯

,, 84 ಯದಭಿನ್ನಾರ್ಥಮನ್ಯೋನ್ಯಂ ತದೇಕಾರ್ಥಂ ಪ್ರಚಕ್ಷತೇ ||
ಪುನರುಕ್ತಮಿದಂ ಪ್ರಾಹುರನ್ಯೇ ಶಬ್ದಾರ್ಥಭೇದತಃ || ೪-೧೨

,, 86 ಯಥೋಪದೇಶಂ ಕ್ರಮಶೋ ನಿರ್ದೇಶೋಽತ್ರ ಕ್ರಮೋ ಮತಃ ||
ತದಪೇತಂವಿಪರ್ಯಾಸಾದಿತ್ಯಾಖ್ಯಾತಮಪಕ್ರಮಮ್||೪-೨೦

,, 90 (2) ಸೂತ್ರಕೃತ್ಪದಕಾರೇಷ್ಟ ಪ್ರಯೋಗಾದ್ಯೋಽನ್ಯಥಾ ಭವೇತ್||
ತಮಾಪ್ತಶ್ರಾವಕಾಸಿದ್ಧೇಃ ಶಬ್ದಹೀನಂ ವಿದುರ್ಯಥಾ || ೪-೨೨

---

* ಕೆಲವು ದೋಷಗಳ ಹೆಸರುಗಳು ಇಲ್ಲಿ ಮಾರ್ಪಟ್ಟಿವೆ.

1 ನೇಯಾರ್ಥಂ ಕ್ಲಿಷ್ಟಮನ್ಯಾರ್ಥಮವಾಚಕಮಯುಕ್ತಿಕಮ್ ||
ಗೂಢಶಬ್ದಾಭಿಧಾನಂ ಚ ಕವಯೋ ನ ಪ್ರಯುಂಜತೇ ||
ಎಂದು ಭಾಮಹನು ಹೇಳಿರುವನು, ದಂಡಿಯು ಈದೋಷಗಳನ್ನು ಹೇಳಲಿಲ್ಲ.

1 92 ಗುರೋರ್ಲಘೋಶ್ಚ ವರ್ಣಸ್ಯ ಯೋಽಸ್ಥಾನೇ ರಚನಾವಿಧಿಃ ||
ತನ್ನ್ಯೂನಾಧಿಕತಾ ವಾಽಪಿ ಭಿನ್ನವೃತ್ತಮಿದಂ ಯಥಾ ||
೪-೨೬

,, 95 (I) ಇದರ ಉಧಾಹರಣಮಾತ್ರವಿದೆ, ೪-೨೮

,, 101 ಶ್ರುತೇಃ ಸಾಮಾನ್ಯಧರ್ಮಾಣಾಂ ವಿಶೇಷಸ್ಯಾನುದಾಹೃತೇಃ||
ಅಪ್ರತಿಷ್ಠಂಯದೇಕತ್ರ ತಜ್ಜ್ಞಾನಂ ಸಂಶಯಂ ವಿದುಃ||
೪-೧೮

1 ನೇಯಾರ್ಥಂ ನೀಯತೇ ಯುಕ್ತ್ಯೋ ಯಸ್ಯಾರ್ಥಃ ಕೃತಿಭಿರ್ಬಲಾತ್ ||
ಶಬ್ದನ್ಯಾಯಾನುಪಾರೂಢಃ ಕಥಂಚಿತ್ಸಾಭಿಸಂಧಿನಾ||೧-೩೮

,, 104 *ಆಗಮೋ ಧರ್ಮಶಾಸ್ತ್ರಾಣಿ ಲೋಕಸೀಮಾ ಚ ತತ್ಕೃತಾ
ತದ್ವಿರೋಧಿ ತದಾಚಾರ ವ್ಯತಿಕ್ರಮಣಕೋ ಯಥಾ ೪-೪೮

,, 106 ನ್ಯಾಯಶ್ಶಾಸ್ತ್ರಂ ತ್ರಿವರ್ಗೋಕ್ತಿರ್ದಂಡನೀತಿಂ ಚ ತಾಂ ವಿದುಃ ||
ಅತೋನ್ಯಾಯವಿರೋಧೀಷ್ಟಂ ಅಪೇತಂ ತತ್ತ್ಯಯಾ ಯಥಾ || ೪-೩೯

,, 107 ಕಲಾ ಸಂಕಲನಾ ಪ್ರಜ್ಞಾ ಶಿಲ್ಪಾನ್ಯಸ್ಯಾಶ್ಚಗೋಚರಃ ||
ವಿಪರ್ಯಸ್ತಂ ತಥೈವಾಹುಃ ತದ್ವಿರೋಧಿಕರಂ ಯಥಾ ||
೪-೩೩

---

(1) (ವಿಸಂಧಿಗೆ ಭಾಮಹನು ಲಕ್ಷ್ಯವನ್ನಿತ್ತಿರುವನು. ಲಕ್ಷಣವನ್ನು ಹೇಳಿಲ್ಲ) ಲಕ್ಷಣವು ಹಸ್ತಲಿಖಿತಪ್ರತಿಯಲ್ಲಿ ಪ್ರಮಾದದಿಂದ ಬಿಟ್ಟುಹೋಗಿರಬಹುದು.. 2. ನೇಯಾರ್ಥವನ್ನು ಮತ್ತೊಂದು ಪ್ರಕರಣದಲ್ಲಿಯೂ ವ್ಯವಹಿತಕ್ಕೆ ಪ್ರತಿಯಾಗಿ ಶಬ್ದಹೀನದೋಷವನ್ನೂ ಭಾಮಹನು ಹೇಳಿರುವಂತೆ ಕಾಣುವುದು. ಲಕ್ಷಣಗಳೂ ಭಿನ್ನವಾಗುವುವು. ದಂಡಿಯೂಕೂಡ ಶಬ್ದಹೀನ ದೋಷವನ್ನೇ ಹೇಳಿರುವನು. ಈಕವಿಯುಮಾತ್ರ ವ್ಯವಹಿತವೆಂದು ಮಾರ್ಪಡಿಸಿರುವನು

* ಈಲಕ್ಷಣಗಳೆಲ್ಲವನ್ನೂ ಕವಿರಾಜಮಾರ್ಗಕರ್ತೃವು ಜೈನನಾದುದರಿಂದ ತನ್ನ ಮತದ ಸಂಕೇತಕ್ಕೆಅನುಗುಣವಾಗಿ ಮಾರ್ಪಡಿಸಿರುವನು.

